# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಡಿಸೆಂಬರ್ ೪, ೨೦೧೪ (ಮಾರ್ಗಶಿರ ೧೩, ಶಕ ವರ್ಷ ೧೯೩೬)<br>Bengaluru, Thursday, December 4, 2014 (Margashira 13, Shaka Varsha 1936) | ಸಂಚಿಕೆ ೪೮<br>Issue 48 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಪಸಂಮೀ 45 ಮೀಇಇ 2014, ಬೆಂಗಳೂರು, ದಿನಾಂಕ: 27–08–2014.**

ಆದೇಶ ಸಂಖ್ಯೆ: ಪಸಂಮೀ/125/ಮೀಇಇ/2013, ದಿನಾಂಕ: 21–02–2014ರ ಒಳನಾಡು ಮೀನುಗಾರಿಕಾ ಕಾರ್ಯನೀತಿ–2014ಕ್ಕೆ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

1) ಕಂಡಿಕೆ–4(1)(ಆ), ಅನುಬಂಧ–4ರ ಕಂಡಿಕೆ–(2) ಮತ್ತು ಅನುಬಂಧ–11ರ ಕಂಡಿಕೆ–(2)ರಲ್ಲಿ ಗರಿಷ್ಟ 2 ಕೆರೆ ಅಥವಾ ಗರಿಷ್ಟ 2 ನದಿಭಾಗಗಳು ಎಂದು ಇದ್ದು, ಅದನ್ನು ಗರಿಷ್ಟ 3 ಕೆರೆ ಅಥವಾ ಗರಿಷ್ಟ 3 ನದಿಭಾಗ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

2) ಕಂಡಿಕೆ–7(ಅ), ಕಂಡಿಕೆ–7(ಆ), ಕಂಡಿಕೆ–7(ಇ), ಅನುಬಂಧ–4ರ ಕಂಡಿಕೆ–(7), ಅನುಬಂಧ–5ರ ಕಂಡಿಕೆ–(4), ಅನುಬಂಧ–11ರ ಕಂಡಿಕೆ–(4) ಮತ್ತು ಅನುಬಂಧ–14ರ ಕಂಡಿಕೆ–(3)ರಲ್ಲಿ ಪ್ರತಿ ಹೆಕ್ಟೇರ್‌ಗೆ ರೂ.500–00 ರಂತೆ ಮತ್ತು ಪ್ರತಿ ಕಿ.ಮೀ. ಉದ್ದದ ನದಿ ಭಾಗಕ್ಕೆ ರೂ.500–00 ರಂತೆ ಎಂದು ಇದ್ದು, ಅದನ್ನು ಪ್ರತಿ ಹೆಕ್ಟೇರ್‌ಗೆ ರೂ.300–00 ಮತ್ತು ಪ್ರತಿ ಕಿ.ಮೀ. ಉದ್ದದ ನದಿ ಭಾಗಕ್ಕೆ ರೂ.300–00 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

3) ಕಂಡಿಕೆ–6 (ಅ)ನ್ನು ಹೊಸದಾಗಿ "ಅತೀವೃಷ್ಟಿ ಅಥವಾ ಅನಾವೃಷ್ಟಿ ಅಥವಾ ಕೆರೆಯ ಜೀರ್ಣೋದ್ಧಾರಕ್ಕಾಗಿ ಕೆರೆಯ ನೀರನ್ನು ಬಸಿದು, ಕಾಮಗಾರಿಯನ್ನು ಮಾಡಿದ್ದಲ್ಲಿ ಮಾತ್ರ ಮೀನುಗಾರರಿಗೆ ನಷ್ಟವಾದ ಗುತ್ತಿಗೆ ಅವಧಿಗೆ ಮಾತ್ರ (ಗರಿಷ್ಟ 2 ವರ್ಷ) ಪಾವತಿಸಹಿತವಾಗಿ ಗುತ್ತಿಗೆಯನ್ನು ಮುಂದುವರಿಸುವುದು" ಎಂದು ಸೇರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರವಿಕುಮಾರ್ ಕೆ.ಆರ್,**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

**P.R. 748**
**S.C. 1000**

### ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಮೀನುಗಾರಿಕಾ ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರ ನೀಡುವ ಬಗ್ಗೆ.

**ಓದಲಾಗಿದೆ :**
1. ಆದೇಶ ಸಂಖ್ಯೆ: ಎಹೆಚ್‌ಎಫ್/ 481/ಎಸ್‌ಎಫ್‌ಎಮ್/94 ದಿನಾಂಕ: 15–12–1994.
2. ಆದೇಶ ಸಂಖ್ಯೆ: ಪಸಂಮೀ/114/ಮೀಇಯೋ/2009 ದಿನಾಂಕ: 23–06–2009.
3. ಆದೇಶ ಸಂಖ್ಯೆ: ಪಸಂಮೀ/208/ಮೀಇಯೋ/2009 ದಿನಾಂಕ: 04–11–2009.
4. ಪತ್ರ ಸಂಖ್ಯೆ: ಎಂಇಎಫ್/8/2013–14, ದಿನಾಂಕ: 24–10–2013 ಮತ್ತು 26–08–2014.

ಪ್ರಸ್ತಾವನೆ:

ಮೇಲೆ ಕ್ರಮ ಸಂಖ್ಯೆ (1), (2) ಮತ್ತು (3)ರಲ್ಲಿ ಓದಲಾದ ಆದೇಶಗಳಲ್ಲಿ, 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರವನ್ನು ನೀಡುವ ಗುರಿಯನ್ನು ಪ್ರತಿವರ್ಷಕ್ಕೆ ದಕ್ಷಿಣ ಕನ್ನಡ–100, ಉಡುಪಿ–100 ಹಾಗೂ ಉತ್ತರ ಕನ್ನಡ–25ರಂತೆ ನಿಗಧಿಪಡಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ನಿರ್ದೇಶಕರು, ಮೀನುಗಾರಿಕೆ ಇಲಾಖೆ ಇವರ ಪತ್ರಗಳಲ್ಲಿ, ಇತ್ತೀಚೆಗೆ ಯಾಂತ್ರೀಕೃತ ದೋಣಿಗಳ ಸಂಖ್ಯೆ ಹೆಚ್ಚಾಗಿದ್ದು, ಮತ್ಸ್ಯಸಂಪನ್ಮೂಲದ ಮೇಲೆ ತೀವ್ರ ಪರಣಾಮ ಬೀರುತ್ತಿದ್ದು, ಭವಿಷ್ಯದಲ್ಲಿ ಮತ್ಸ್ಯಕ್ಷಾಮ ಉಂಟಾಗಬಹುದಾದ ಹಿನ್ನೆಲೆಯಲ್ಲಿ ಹೊಸ ಯಾಂತ್ರೀಕೃತ ದೋಣಿಗಳ ಸೇರ್ಪಡೆಗೆ ಸಾಧ್ಯತಾ ಪತ್ರ ನೀಡುವಂತೆ ತಡೆಹಿಡಿಯಲಾಗಿತ್ತು. ಆದರೆ, ಮೀನುಗಾರರ ತೀವ್ರ ಒತ್ತಡದ ಮೇರೆಗೆ ಸರ್ಕಾರವು ದಕ್ಷಿಣ ಕನ್ನಡ ಜಿಲ್ಲೆಯ 55, ಉಡುಪಿ ಜಿಲ್ಲೆಯ 185 ಹಾಗೂ ಉತ್ತರ ಕನ್ನಡ ಜಿಲ್ಲೆಯ 25 ಅರ್ಜಿದಾರರಿಗೆ ಸಾಧ್ಯತಾ ಪತ್ರ ನೀಡಲು ಅನುಮತಿ ನೀಡಿರುತ್ತದೆಂದು ಹಾಗೂ ಇನ್ನು ಮುಂದೆ ಸಾಧ್ಯತಾ ಪತ್ರ ನೀಡುವಾಗ ತಜ್ಞರಿಂದ ಅಧ್ಯಯನ ವರದಿಯನ್ನು ಪಡೆದು ಹಾಗೂ ಇತರೆ ರಾಜ್ಯಗಳಲ್ಲಿ ಈ ಬಗ್ಗೆ ಕೈಗೊಂಡ ಕ್ರಮದ ಬಗ್ಗೆ ವರದಿಯನ್ನು ಪಡೆದು ನಂತರ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆಂದು ವರದಿಸಿರುತ್ತಾರೆ.

ಮುಂದುವರೆದು ಕೇಂದ್ರ ಸರ್ಕಾರವು "Revalidating the Potential of Fishery Resources in Indian EEZ" ನ ವರದಿಯನ್ನು ನೀಡಿದ್ದು, ಎಲ್ಲಾ ರಾಜ್ಯಗಳಲ್ಲಿ ಇರಬಹುದಾದ Optimum Fleet Size ನ್ನು ನಿಗಧಿಪಡಿಸಿರುತ್ತಾರೆ. ಅದರಂತೆ ಕರ್ನಾಟಕದಲ್ಲಿ 2182 ಯಾಂತ್ರೀಕೃತ ದೋಣಿಗಳು ಕಾರ್ಯಾಚರಣೆ ಮಾಡಬಹುದೆಂದು ಶಿಫಾಸ್ಸು ಮಾಡಲಾಗಿದ್ದು, ಆದರೆ, ರಾಜ್ಯದಲ್ಲಿ 2902 ಯಾಂತ್ರೀಕೃತ ದೋಣಿಗಳು ಕಾರ್ಯಾಚರಣೆಯಲ್ಲಿರುತ್ತದೆ. ಆದ್ದರಿಂದ, ಪ್ರಸ್ತುತ ಸಾಧ್ಯತಾ ಪತ್ರ ನೀಡಲು ಬಾಕಿ ಇರುವ ದಕ್ಷಿಣ ಕನ್ನಡ ಜಿಲ್ಲೆಗೆ 100, ಉಡುಪಿ ಜಿಲ್ಲೆಗೆ 150 ಹಾಗೂ ಉತ್ತರ ಕನ್ನಡ ಜಿಲ್ಲೆಗೆ 25 ದೋಣಿಗಳ ನಿರ್ಮಾಣಕ್ಕೆ ಸಾಧ್ಯತಾ ಪತ್ರ ನೀಡಲು ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಪಸಂಮೀ 142 ಮೀಇಯೋ 2014, ಬೆಂಗಳೂರು ದಿನಾಂಕ: 10–09–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರಾವಳಿ ಜಿಲ್ಲೆಗಳಲ್ಲಿ 48 ಅಡಿಗಿಂತ ಹೆಚ್ಚಿನ ಉದ್ದದ ಯಾಂತ್ರಿಕ ದೋಣಿಗಳು ನಿರ್ಮಿಸಲು ಕೆಳಕಂಡ ಅಂಶಗಳನ್ನು ಕಡ್ಡಾಯವಾಗಿ ಪೂರೈಸಿರುವುದನ್ನು ಖಚಿತಪಡಿಸಿಕೊಳ್ಳುವ ಹಾಗೂ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸಾಧ್ಯತಾ ಪ್ರಮಾಣ ಪತ್ರಗಳನ್ನು ನೀಡಲು ಆದೇಶಿಸಿದೆ.

1) ಉಡುಪಿ ಜಿಲ್ಲೆಗೆ – 150, ದಕ್ಷಿಣ ಕನ್ನಡ ಜಿಲ್ಲೆಗೆ – 100 ಮತ್ತು ಉತ್ತರ ಕನ್ನಡ ಜಿಲ್ಲೆಗೆ – 25 ಸಾಧ್ಯತಾ ಪತ್ರಗಳನ್ನು ನೀಡತಕ್ಕದ್ದು.

2) ಎಲ್ಲಾ ಅಗತ್ಯ ದಾಖಲೆಗಳೊಂದಿಗೆ ಪೂರ್ಣ ಪ್ರಮಾಣದ ಅರ್ಜಿ ಸಲ್ಲಿಸಿರುವ ಅರ್ಜಿದಾರರನ್ನು ಜ್ಯೇಷ್ಠತಾ ಆಧಾರದಲ್ಲಿ ಪರಿಗಣಿಸತಕ್ಕದ್ದು.

3) ಯಾವುದೇ ಯಾಂತ್ರೀಕೃತ ದೋಣಿ ಹೊಂದಿಲ್ಲದ ಅರ್ಜಿದಾರರಿಗೆ / ಕುಟುಂಬಕ್ಕೆ ಪ್ರಥಮ ಆದ್ಯತೆ ನೀಡತಕ್ಕದ್ದು. ಯಾವುದೇ ಕುಟುಂಬಕ್ಕೆ ಒಂದಕ್ಕಿಂತ ಹೆಚ್ಚಿನ ಯಾಂತ್ರಿಕ ದೋಣಿಗೆ ಸಾಧ್ಯತಾ ಪತ್ರ ನೀಡುವಂತಿಲ್ಲ.

4) ಪರ್ಸೀನ್ ದೋಣಿ ನಿರ್ಮಾಣಕ್ಕೆ ಸಂಬಂಧಿಸಿದಂತೆ ಹಳೆಯ ಮತ್ತು ದುರಸ್ತಿಯಲ್ಲಿರುವ ದೋಣಿಗಳ ಬದಲಿಗೆ ಕಟ್ಟುವ ಪರ್ಸೀನ್ ದೋಣಿಗಳಿಗೆ ಮಾತ್ರ ಅನುಮತಿ ನೀಡತಕ್ಕದ್ದು.

5) ಅರ್ಜಿದಾರರು ಬ್ಯಾಂಕ್ ಸಾಲವನ್ನು ತಮ್ಮ ಸ್ವಂತ ಜಿಲ್ಲೆಯ ಬ್ಯಾಂಕ್ ಶಾಖೆಯಿಂದ ಮಾತ್ರ ಪಡೆಯತಕ್ಕದ್ದು.

6) ಅರ್ಜಿದಾರರು ಸಾಧ್ಯತಾ ಪತ್ರ ಪಡೆದ ದಿನಾಂಕದಿಂದ 6 ತಿಂಗಳೊಳಗಾಗಿ ದೋಣಿ ನಿರ್ಮಾಣವನ್ನು ಪೂರ್ಣಗೊಳಿಸಿ ದೋಣಿಯನ್ನು ನೋಂದಣಿ ಮಾಡತಕ್ಕದ್ದು ಮತ್ತು ಮೀನುಗಾರಿಕೆಗೆ ನಿಯಮಾನುಸಾರ ಪರವಾನಗಿಯನ್ನು ಪಡೆಯತಕ್ಕದ್ದು. ಇಲ್ಲವಾದಲ್ಲಿ, ಸಾಧ್ಯತಾ ಪತ್ರವು ರದ್ದುಗೊಳ್ಳುವುದು.

7) ಸಾಧ್ಯತಾ ಪತ್ರ ಪಡೆದು ನಿರ್ಮಾಣ ಮಾಡಿದ ದೋಣಿಯನ್ನು 2 ವರ್ಷಗಳ ಅವಧಿಯೊಳಗೆ ಪರಭಾರೆ ಮಾಡತಕ್ಕದ್ದಲ್ಲ.

8) ಸಾಧ್ಯತಾ ಪತ್ರವನ್ನು ನೀಡುವಾಗ 20 ಮೀಗಿಂತ ಕಡಿಮೆ ಉದ್ದದ ದೋಣಿ ಹಾಗೂ 350 ಹೆಚ್.ಪಿ.ಗಿಂತ ಕಡಿಮೆ ಅಶ್ವಶಕ್ತಿ ಹೊಂದಿರುವ ಇಂಜಿನ್ ಅಳವಡಿಸುವುದು ಕಡ್ಡಾಯವಾಗಿದೆ.

9) ದೋಣಿಗಳು ಫಿಶ್‌ಹೋಲ್ಡ್ ನಿರ್ಮಿಸುವಾಗ "PUF" Panel ಉಪಯೋಗಿಸುವುದು.

10) ದೋಣಿಗಳಲ್ಲಿ ಅಗತ್ಯವಾದ ಜೀವರಕ್ಷಕ ಉಪಕರಣಗಳನ್ನು ಕಡ್ಡಾಯವಾಗಿ ಅಳವಡಿಸತಕ್ಕದ್ದು.

11) ಫಲಾನುಭವಿಗಳಿಗೆ ಸಾಧ್ಯತಾ ಪತ್ರವನ್ನು ನೀಡುವ ಮಾಹಿತಿಯನ್ನು ಮೀನುಗಾರಿಕೆ ಇಲಾಖೆಯ ವೆಬ್‌ಸೈಟ್‌ನಲ್ಲಿ, ಮೀನುಗಾರಿಕೆ ನಿರ್ದೇಶನಾಲಯದ ಸೂಚನಾ ಫಲಕದಲ್ಲಿ ಹಾಗೂ ಸಂಬಂಧಪಟ್ಟ ಅಧಿಕಾರಿಗಳ ಕಛೇರಿಗಳಲ್ಲಿರುವ ಸೂಚನಾ ಫಲಕದಲ್ಲಿ ಹಾಗೂ ಸಂಬಂಧಪಟ್ಟ ಅಧಿಕಾರಿಗಳ ಕಛೇರಿಗಳಲ್ಲಿರುವ ಸೂಚನಾ ಫಲಕಗಳಲ್ಲಿ ಪ್ರಕಟಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಜಯಣ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**P.R. 749**

**S.C. 50**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ರಾಜ್ಯದ ರಫ್ತನ್ನು ಉತ್ತೇಜಿಸಲು ಶ್ರೇಷ್ಠ ರಫ್ತುದಾರರಿಗೆ ರಫ್ತು ಪ್ರಶಸ್ತಿಗಳನ್ನು ನೀಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಐ 26 ಎಸ್‌ಪಿಐ 2012, ದಿನಾಂಕ: 18–09–2013.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರವು ರಫ್ತನ್ನು ಉತ್ತೇಜಿಸುವ ನಿಟ್ಟಿನಲ್ಲಿ 1992–1993 ರಿಂದ ರಫ್ತು ಪ್ರಶಸ್ತಿಗಳನ್ನು ಶ್ರೇಷ್ಠ ರಫ್ತುದಾರರಿಗೆ ನೀಡುತ್ತಿದ್ದು, ಅವರ ಸಾಧನೆಯನ್ನು ಗುರುತಿಸುವ ಒಂದು ದಿಟ್ಟ ಹೆಜ್ಜೆಯಾಗಿದೆ. ರಫ್ತು ಪ್ರಶಸ್ತಿ ಪ್ರಧಾನ ಸಮಾರಂಭವು ವಾರ್ಷಿಕ ಕಾರ್ಯಕ್ರಮವಾಗಿದ್ದು, ರಫ್ತು ಕ್ಷೇತ್ರದಲ್ಲಿ ಆರೋಗ್ಯಕರ ಪೈಪೋಟಿಯನ್ನು ಸೃಷ್ಟಿಸಿ ರಾಜ್ಯದಿಂದ ಅಂತರಾಷ್ಟ್ರೀಯ ವ್ಯಾಪಾರವನ್ನು ಹೆಚ್ಚಿಸುವ ಮೂಲಕ ಸಣ್ಣ ಕೈಗಾರಿಕೋದ್ಯಮಿಗಳಿಗೆ ರಫ್ತು ಕ್ಷೇತ್ರಕ್ಕೆ ಪ್ರವೇಶಿಸಲು ಸ್ಫೂರ್ತಿಯನ್ನು ನೀಡಿ ರಾಜ್ಯದ ವಿದೇಶಿ ವಿನಿಮಯವನ್ನು ಹೆಚ್ಚಿಸಲು ಸಹಕಾರಿಯಾಗಿದೆ.

ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರವು ರಾಜ್ಯದ ರಫ್ತು ಪ್ರಶಸ್ತಿಗಳ ಆಯ್ಕೆ ಹಾಗೂ ಪ್ರಧಾನ ಮಾಡುವ ಉಸ್ತುವಾರಿ ಸಂಸ್ಥೆಯಾಗಿರುತ್ತದೆ. ಈ ನಿಟ್ಟಿನಲ್ಲಿ ದಿನಾಂಕ: 09–01–2014 ರಂದು ನಡೆದ ರಫ್ತು ಪ್ರಶಸ್ತಿಗಳ ಆಯ್ಕೆ ಸಮಿತಿಯ ಸಭೆಯಲ್ಲಿ ಸದಸ್ಯರು ಪ್ರಸ್ತುತ ರಫ್ತು ಪ್ರಶಸ್ತಿಗಳ ಆಯ್ಕೆಯ ಕೆಲವೊಂದು ನಿಯಮಗಳನ್ನು ಪರಿಷ್ಕರಿಸಬೇಕೆಂದು ತಿಳಿಸಿರುತ್ತಾರೆ. ಆಯ್ಕೆ ಸಮಿತಿಯಲ್ಲಿ ಸ್ವೀಕೃತವಾದ ಸಲಹೆಗಳನ್ನು ಅಳವಡಿಸಿ ರಫ್ತು ಪ್ರಶಸ್ತಿಗಳನ್ನು 2013–14ರಿಂದ ನೀಡುವ ಬಗ್ಗೆ ಆದೇಶವನ್ನು ಮಾರ್ಪಡಿಸಲು ಉದ್ದೇಶಿಸಲಾಗಿದೆ.

ಅದರಂತೆ ಮುಂದಿನ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಸಿಐ 212 ಎಸ್‌ಪಿಐ 2014, ಬೆಂಗಳೂರು, ದಿನಾಂಕ: 16–10–2014

ಮೇಲಿನ ಪ್ರಸ್ತಾವನೆಯಲ್ಲಿ ಮತ್ತು ಓದಲಾದ ಸರ್ಕಾರದ ಆದೇಶದಲ್ಲಿ ವಿವರಿಸಿರುವಂತೆ ರಾಜ್ಯದಲ್ಲಿ ರಫ್ತು ಪ್ರಶಸ್ತಿಯನ್ನು ನೀಡಲು 2013–14 ರಿಂದ ಅನ್ವಯವಾಗುವಂತೆ ಈ ಕೆಳಕಂಡಂತೆ ನಿಯಮವನ್ನು ಪರಿಷ್ಕರಿಸಲಾಗಿದೆ.

1. ರಫ್ತು ಪ್ರಶಸ್ತಿಯನ್ನು ಅನುಬಂಧ (1) ರಲ್ಲಿರುವಂತೆ ಉತ್ಪನ್ನಗಳ ವರ್ಗೀಕರಣದಂತೆ ನೀಡುವುದು.
2. ವರ್ಗವಾರು ರಫ್ತುದಾರರು ವಾರ್ಷಿಕ ವಹಿವಾಟಿನಲ್ಲಿ ಶೇಕಡ 10% ಕ್ಕಿಂತ ಹೆಚ್ಚು ಸಾಧನೆ ಮಾಡಿರುವವರಿಗೆ (Annual Incremental Growth in Exports) ಪ್ರಶಸ್ತಿಯನ್ನು ನೀಡುವ ಮೂಲಕ ರಾಜ್ಯದ ರಫ್ತುದಾರರ ಸಾಧನೆಯನ್ನು ಗುರುತಿಸಲಾಗುವುದು.
3. ಸತತವಾಗಿ 3 ವರ್ಷಗಳಲ್ಲಿ ಸಮಗ್ರ ಹಾಗೂ ಉತ್ಪನ್ನಗಳ ವರ್ಗಗಳಲ್ಲಿ ರಫ್ತು ಪ್ರಶಸ್ತಿಯನ್ನು ಪಡೆಯುತ್ತಿರುವ ರಫ್ತುದಾರರಿಗೆ ವಿಶಿಷ್ಠ ಮನ್ನಣಾ ಪ್ರಶಸ್ತಿ ನೀಡುವುದರ ಮೂಲಕ ನೂತನ ರಫ್ತುದಾರರಿಗೆ ರಫ್ತು ಪ್ರಶಸ್ತಿ ಪಡೆಯಲು ಅವಕಾಶ ಕಲ್ಪಿಸುವುದು.

ರಾಜ್ಯವು ರಫ್ತು ಪ್ರಶಸ್ತಿಗಾಗಿ ಗುರುತಿಸಿರುವ 16 ಉತ್ಪನ್ನಗಳನ್ನು ಅನುಬಂಧ–1 ರಲ್ಲಿ, ಪ್ರಶಸ್ತಿಯ ವಿವರಗಳನ್ನು ಅನುಬಂಧ–2 ರಲ್ಲಿ ರಫ್ತು ಪ್ರಶಸ್ತಿಯನ್ನು ಆಯ್ಕೆಮಾಡುವ ಸದಸ್ಯರ ವಿವರಗಳನ್ನು ಅನುಬಂಧ–3ರಲ್ಲಿ ಹಾಗೂ ರಫ್ತು ಪ್ರಶಸ್ತಿಗೆ ಸಂಬಂಧಿಸಿದ ಷರತ್ತು ನಿಬಂಧನೆಗಳನ್ನು ಅನುಬಂಧ–4 ರಲ್ಲಿ ವಿವರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ–1**

**ಉತ್ಪನ್ನಗಳ ವರ್ಗೀಕರಣ**

1) ಕೃಷಿ ಮತ್ತು ತೋಟಗಾರಿಕೆ ಉತ್ಪನ್ನಗಳು (ಕಾಫಿ, ಗೋಡಂಬಿ ಮತ್ತು ಸಾಂಬಾರು ಪದಾರ್ಥಗಳನ್ನು ಒಳಗೊಂಡಂತೆ).

2) ಆಹಾರ ಸಂಸ್ಕರಣೆ ಘಟಕಗಳ ಉತ್ಪನ್ನಗಳು.

3) ಸಿದ್ಧ ಉಡುಪುಗಳು (ಹತ್ತಿ, ಉಣ್ಣೆ ಮತ್ತು ರೇಷ್ಮೆ ಒಳಗೊಂಡಂತೆ).

4) ಎಲೆಕ್ಟ್ರಾನಿಕ್ಸ್ ಮತ್ತು ಕಮ್ಯೂನಿಕೇಷನ್ಸ್ (ಐಟಿ, ಬಿಟಿ ಮತ್ತು ಐಟಿಇಎಸ್ ವಲಯ ಹೊರತುಪಡಿಸಿ).

5) ವಿದ್ಯುಚ್ಛಕ್ತಿ ಸಲಕರಣೆಗಳು.

6) ಇಂಜಿನಿಯರಿಂಗ್ ಉತ್ಪನ್ನಗಳು (ಮೆಷಿನ್ ಟೂಲ್ಸ್ ಮತ್ತು ಆಟೋಮೊಬೈಲ್ಸ್ ಮತ್ತು ಏರೋಸ್ಪೇಸ್ ಒಳಗೊಂಡಂತೆ).

7) ಕರಕುಶಲ ವಸ್ತುಗಳು (ಕಲೆ ಮತ್ತು ಕ್ರ್ಯಾಫ್ಟ್ಸ್ ಒಳಗೊಂಡಂತೆ).

8) ಖನಿಜಗಳು ಮತ್ತು ಖನಿಜ ಮೂಲದ ಉತ್ಪನ್ನಗಳು (ಕಬ್ಬಿಣ ಅದಿರು ಹೊರತುಪಡಿಸಿ).

9) ಜವಳಿ ಉತ್ಪನ್ನಗಳು (ಹತ್ತಿ, ಉಣ್ಣೆ ಮತ್ತು ರೇಷ್ಮೆ ಉತ್ಪನ್ನಗಳು ಒಳಗೊಂಡಂತೆ).

10) ರತ್ನ ಮತ್ತು ಆಭರಣಗಳು.

11) ಪೆಟ್ರೋಲಿಯಂ ಮತ್ತು ಪೆಟ್ರೋಲಿಯಂ ಉತ್ಪನ್ನಗಳು.

12) ರಾಸಾಯನಿಕ ಮತ್ತು ಪ್ಲಾಸ್ಟಿಕ್ ಉತ್ಪನ್ನಗಳು

13) ಔಷಧ ಮತ್ತು ಔಷಧ ಉತ್ಪನ್ನಗಳು.

14) ಸಾಗರೋತ್ಪನ್ನಗಳು.

15) ಚರ್ಮದ ಉತ್ಪನ್ನಗಳು.

16) ಸೇವೆಗಳು (ಪ್ರವಾಸೋದ್ಯಮ, ಆರೋಗ್ಯ, ಶಿಕ್ಷಣ, ಆತಿಥ್ಯ ಮತ್ತು ಇಂಜಿನಿಯರಿಂಗ್).

**ಎಸ್.ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ–2**

**ಪ್ರಶಸ್ತಿಯ ವಿವರಗಳು**

| ಕ್ರ. ಸಂ. | ಪ್ರಶಸ್ತಿಯ ವಿವರ | ವರ್ಗಗಳು | ಒಟ್ಟು ಚಿನ್ನದ ಪ್ರಶಸ್ತಿಗಳು |
|---|---|---|---|
| 1 | ಸಮಗ್ರ ರಫ್ತು ಪ್ರಶಸ್ತಿ | • ಅತೀ ಸಣ್ಣ / ಸಣ್ಣ ಘಟಕಗಳು<br>• ಮಧ್ಯಮ / ಬೃಹತ್ ಘಟಕಗಳು.<br>• ಸರಕು ರಫ್ತುದಾರರು.<br>• ಸೇವಾ ವಲಯಗಳು | 4 |
| 2 | ಉತ್ತಮ ಉತ್ಪಾದಕರ ರಫ್ತು ಪ್ರಶಸ್ತಿ (ಉತ್ಪನ್ನಗಳ ವರ್ಗೀಕರಣ) | • ಅತೀ ಸಣ್ಣ / ಸಣ್ಣ ಉತ್ಪಾದಕ ಘಟಕಗಳು | 15 |
| 3 | ಉತ್ತಮ ಉತ್ಪಾದಕರ ರಫ್ತು ಪ್ರಶಸ್ತಿ (ಉತ್ಪನ್ನಗಳ ವರ್ಗೀಕರಣ) | • ಮಧ್ಯಮ / ಬೃಹತ್ ಉತ್ಪಾದಕ ಘಟಕಗಳು | 15 |
| 4 | ಸೇವಾ ವಲಯಗಳು | • ಅತೀ ಸಣ್ಣ / ಸಣ್ಣ ಸೇವಾ ಉದ್ದಿಮೆಗಳು<br>• ಮಧ್ಯಮ / ಬೃಹತ್ ಸೇವಾ ಉದ್ದಿಮೆಗಳು | 2 |
| 5 | ಮಹಿಳಾ ಉದ್ದಿಮೆದಾರರು | • ಅತೀ ಸಣ್ಣ / ಸಣ್ಣ ಉದ್ದಿಮೆಗಳು<br>• ಮಧ್ಯಮ / ಬೃಹತ್ ಉದ್ದಿಮೆಗಳು | 2 |
| 6 | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಉದ್ದಿಮೆದಾರರು | • ಅತೀ ಸಣ್ಣ / ಸಣ್ಣ ಉದ್ದಿಮೆಗಳು<br>• ಮಧ್ಯಮ / ಬೃಹತ್ ಉದ್ದಿಮೆಗಳು | 2 |
| 7 | ಜಿಲ್ಲಾವಾರು ರಫ್ತು ಪ್ರಶಸ್ತಿಗಳು | ಅತೀ ಸಣ್ಣ / ಸಣ್ಣ ಮತ್ತು ಮಧ್ಯಮ / ಬೃಹತ್ ಉದ್ದಿಮೆಗಳು | 30 |
| 8 | ನೂತನ ರಫ್ತುದಾರರು – ಮೊದಲ ಬಾರಿಗೆ ರಫ್ತನ್ನು ಪ್ರಾರಂಭಿಸಿರುವವರಿಗೆ | ಅತೀ ಸಣ್ಣ / ಸಣ್ಣ ಮತ್ತು ಮಧ್ಯಮ / ಬೃಹತ್ ಉದ್ದಿಮೆಗಳು | 1 |
| 9 | ವಿಶಿಷ್ಟ ಮನ್ನಣಾ (ಪ್ಲಾಟಿನಮ್) ಪ್ರಶಸ್ತಿ | ಸತತವಾಗಿ 3 ವರ್ಷಗಳಿಂದ ಸಮಗ್ರ ಹಾಗೂ ಉತ್ಪನ್ನಗಳ ವರ್ಗಗಳಲ್ಲಿ ರಫ್ತು ಪ್ರಶಸ್ತಿಯನ್ನು ಪಡೆಯುತ್ತಿರುವ ರಫ್ತುದಾರರಿಗೆ ವಿಶಿಷ್ಠ ಮನ್ನಣಾ ಪ್ರಶಸ್ತಿ. | 10 |
| 10 | ವಾರ್ಷಿಕ ರಫ್ತು ಬೆಳವಣಿಗೆ ಪ್ರಶಸ್ತಿ – ವರ್ಗವಾರು ರಫ್ತುದಾರರು ವಾರ್ಷಿಕ ವಹಿವಾಟಿನಲ್ಲಿ ಶೇಕಡ 10% ಗಿಂತ ಹೆಚ್ಚು ಸಾಧನೆ ಮಾಡಿರುವವರಿಗೆ (Annual incremental Growth in exports) ಪ್ರಶಸ್ತಿ | • ಅತೀ ಸಣ್ಣ / ಸಣ್ಣ ಘಟಕಗಳು<br>• ಮಧ್ಯಮ / ಬೃಹತ್ ಘಟಕಗಳು<br>• ಸರಕು ರಫ್ತುದಾರರು.<br>• ಸೇವಾ ವಲಯಗಳು | 4 |
| | | ಒಟ್ಟು | 85 |

**ಎಸ್.ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ–3**

**ರಫ್ತು ಪ್ರಶಸ್ತಿಯನ್ನು ಆಯ್ಕೆ ಮಾಡುವ ಸದಸ್ಯರ ವಿವರಗಳು**

| | | |
|---|---|---|
| 1 | ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | – ಅಧ್ಯಕ್ಷರು |
| 2 | ನಿರ್ದೇಶಕರು, ತಾಂತ್ರಿಕ ಕೋಶ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – ಸದಸ್ಯರು |
| 3 | ಫೆಡರೇಷನ್ ಆಫ್ ಇಂಡಿಯನ್ ಎಕ್ಸ್‌ಪೋರ್ಟ್ ಆರ್ಗನೈಸೇಷನ್ ಪ್ರತಿನಿಧಿ, ಬೆಂಗಳೂರು | – ಸದಸ್ಯರು |
| 4 | ಪ್ರಾದೇಶಿಕ ಜಂಟಿ ನಿರ್ದೇಶಕರು, ಡೈರೆಕ್ಟರ್ ಜನರಲ್ ಆಫ್ ಫಾರಿನ್ ಟ್ರೇಡ್ ಪ್ರತಿನಿಧಿ, ಬೆಂಗಳೂರು | – ಸದಸ್ಯರು |
| 5 | ಆಯುಕ್ತರು (ಸುಂಕ), ಭಾರತ ಸರ್ಕಾರ, ಬೆಂಗಳೂರು | – ಸದಸ್ಯರು |
| 6 | ಆಯುಕ್ತರು (ಅಬಕಾರಿ), ಭಾರತ ಸರ್ಕಾರ, ಬೆಂಗಳೂರು | – ಸದಸ್ಯರು |
| 7 | ಅಭಿವೃದ್ಧಿ ಆಯುಕ್ತರು, ಕೊಚ್ಚಿನ್ ವಿಶೇಷ ಆರ್ಥಿಕ ವಲಯದ ಪ್ರತಿನಿಧಿ, ಬೆಂಗಳೂರು | – ಸದಸ್ಯರು |
| 8 | ಡೆಪ್ಯೂಟಿ ಜನರಲ್ ಮ್ಯಾನೇಜರ್, ವಿದೇಶಿ ವಿನಿಮಯ ಶಾಖೆ, ಆರ್‌ಟಿಐ, ಬೆಂಗಳೂರು | – ಸದಸ್ಯರು |
| 9 | ನಿರ್ದೇಶಕರು, ಅತೀ ಸಣ್ಣ, ಸಣ್ಣ, ಮಧ್ಯಮ ಉದ್ದಿಮೆಗಳ ಅಭಿವೃದ್ಧಿ ಸಂಸ್ಥೆ, (MSME Development Institute) ಭಾರತ ಸರ್ಕಾರ, ಬೆಂಗಳೂರು | – ಸದಸ್ಯರು |
| 10 | ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಬೆಂಗಳೂರು | – ಸದಸ್ಯರು |
| 11 | ವ್ಯವಸ್ಥಾಪಕ ನಿರ್ದೇಶಕರು, ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ, ಬೆಂಗಳೂರು | – ಸದಸ್ಯ ಕಾರ್ಯದರ್ಶಿ |

**ಎಸ್.ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ–4**

**ರಫ್ತು ಪ್ರಶಸ್ತಿಯ ನಿಬಂಧನೆಗಳು**

1. ರಫ್ತುದಾರರು ಕರ್ನಾಟಕ ಮೂಲದವರಾಗಿರಬೇಕು.
2. ಒಟ್ಟು ವಾರ್ಷಿಕವಾರು ರಫ್ತು ವಹಿವಾಟಿನ ಆಧಾರದ ಮೇಲೆ ರಫ್ತು ಪ್ರಶಸ್ತಿಗೆ ಶ್ರೇಷ್ಠ ರಫ್ತುದಾರರನ್ನು ಆಯ್ಕೆ ಮಾಡಲಾಗುವುದು.
3. ರಫ್ತುದಾರರು ನಗದೀಕರಣದ ದಾಖಲಾತಿಗಾಗಿ (Bank Realization Certificate) ಸಲ್ಲಿಸುವುದು.
4. ಒಂದು ವರ್ಗದಲ್ಲಿ ರಫ್ತು ಪ್ರಶಸ್ತಿಯನ್ನು ಪಡೆಯಲು ಅರ್ಹರಿರುವ ರಫ್ತುದಾರರನ್ನು ಬೇರೆ ಯಾವುದೇ ವರ್ಗದಲ್ಲಿ ಪರಶಸ್ತಿಗೆ ಅರ್ಹರಾಗಿದ್ದರೂ ಪರಿಗಣಿಸಲಾಗುವುದಿಲ್ಲ. ರಫ್ತುದಾರರು ಯಾವುದೇ ವರ್ಗದಲ್ಲಿ ಅರ್ಜಿ ಸಲ್ಲಿಸಿದರು ಕೇವಲ ಒಂದು ಪ್ರಶಸ್ತಿಯನ್ನು ಪಡೆದುಕೊಳ್ಳಬಹುದಾಗಿದೆ.
5. ರಫ್ತುದಾರರು ಒಂದಕ್ಕಿಂತ ಹೆಚ್ಚು ವರ್ಗದಲ್ಲಿ ಅರ್ಜಿ ಸಲ್ಲಿಸಿದ್ದರೆ, ರಫ್ತುದಾರರು ಯಾವ ವರ್ಗಕ್ಕೆ ಸೇರುತ್ತಾರೆ ಎಂದು ನಿರ್ಣಯಿಸುವ ಅಧಿಕಾರ ರಫ್ತು ಪ್ರಶಸ್ತಿಯ ಆಯ್ಕೆ ಸಮಿತಿಗೆ ಇರುತ್ತದೆ. ರಫ್ತುದಾರರು ಸೂಕ್ತವಲ್ಲದ ವರ್ಗಕ್ಕೆ ಅರ್ಜಿ ಸಲ್ಲಿಸಿದಲ್ಲಿ ರಫ್ತು ಪ್ರಶಸ್ತಿಯ ಆಯ್ಕೆ ಸಮಿತಿಯು ಸರಿಯಾದ ವರ್ಗವನ್ನು ನಿರ್ಧರಿಸಿ ರಫ್ತು ಪ್ರಶಸ್ತಿಗೆ ಪರಿಗಣಿಸಲಾಗುವುದು.
6. ಮಹಿಳಾ ಉದ್ದಿಮೆದಾರರಿಗೆ ರಫ್ತು ಪ್ರಶಸ್ತಿ – National Level Standing Committee ವ್ಯಾಖ್ಯಾನದ ಪ್ರಕಾರ ಮಹಿಳಾ ಉದ್ದಿಮೆದಾರರು ಯಾರೆಂದರೆ ಉದ್ದಿಮೆಯ ಸ್ವಾಮ್ಯತೆ ಮತ್ತು ಆಡಳಿತದ ಅಧಿಕಾರ ಮಹಿಳೆಯು ಹೊಂದಿದ್ದು, ಉದ್ದಿಮೆಯಲ್ಲಿ ಶೇಕಡ 51 ಷೇರು ಬಂಡವಾಳ ಹೊಂದಿರಬೇಕು.
7. ಐಟಿ, ಬಿಟಿ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯವರು ಪ್ರತ್ಯೇಕವಾಗಿ ಜೈವಿಕ ತಂತ್ರಜ್ಞಾನ, ಐಟಿ ಮತ್ತು ಐಟಿಇಎಸ್ ಕ್ಷೇತ್ರಗಳಿಗೆ ರಫ್ತು ಪ್ರಶಸ್ತಿಗಳನ್ನು ನೀಡುತ್ತಿರುವುದರಿಂದ ಅವರನ್ನು ಈ ಪ್ರಶಸ್ತಿಯಲ್ಲಿ ಪರಿಗಣಿಸಲಾಗುವುದಿಲ್ಲ.

**ಅತೀ ಸಣ್ಣ, ಸಣ್ಣ, ಮಧ್ಯಮ ಮತ್ತು ಬೃಹತ್ ಉದ್ದಿಮೆಗಳ ವ್ಯಾಖ್ಯಾನ**

**ಅ) ಉತ್ಪಾದಕಾ ಘಟಕಗಳು.–**

ಎಮ್ ಎಸ್ ಎಮ್ ಇ ಡಿ ಕಾಯಿದೆ 2006 ರ ಪ್ರಕಾರ ಉತ್ಪಾದನಾ ಘಟಕಗಳನ್ನು ಅವುಗಳ ಯಂತ್ರ ಸ್ಥಾವರಗಳಲ್ಲಿ ಹೂಡಲಾದ ಬಂಡವಾಳದ ಪ್ರಕಾರ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

ಅತೀ ಸಣ್ಣ ಉಧ್ಯಮ : 25 ಲಕ್ಷ ರೂಪಾಯಿಗಳವರೆಗಿನ ಬಂಡವಾಳ ಹೂಡಿಕೆ

ಸಣ್ಣ ಉಧ್ಯಮ : 25 ಲಕ್ಷ ರೂಪಾಯಿಗಳಿಂದ 500 ಲಕ್ಷ ರೂಪಾಯಿಗಳವರೆಗೆ ಬಂಡವಾಳ ಹೂಡಿಕೆ

ಮಧ್ಯಮ ಉಧ್ಯಮ : 500 ಲಕ್ಷ ರೂಪಾಯಿಗಳಿಂದ 1000 ಲಕ್ಷ ರೂಪಾಯಿಗಳವರೆಗೆ ಬಂಡವಾಳ ಹೂಡಿಕೆ

ಬೃಹತ್ ಉಧ್ಯಮ : 1000 ಲಕ್ಷ ರೂಪಾಯಿಗಳಿಗಿಂತ ಮೇಲ್ಪಟ್ಟು

**ಆ) ಸೇವಾ ಘಟಕಗಳು.–**

ಎಮ್ ಎಸ್ ಎಮ್ ಇ ಡಿ ಕಾಯಿದೆ 2006 ರ ಪ್ರಕಾರ ಸೇವಾ ಉದ್ಯಮಗಳನ್ನು ಅವುಗಳ ಉಪಕರಣಗಳ ಮೇಲೆ ಹೂಡಲಾದ ಬಂಡವಾಳದ ಪ್ರಕಾರ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

ಅತೀ ಸಣ್ಣ ಉದ್ಯಮ : 10 ಲಕ್ಷ ರೂಪಾಯಿಗಳವರೆಗಿನ ಬಂಡವಾಳ ಹೂಡಿಕೆ

ಸಣ್ಣ ಉದ್ಯಮ : 10 ಲಕ್ಷ ರೂಪಾಯಿಗಳಿಂದ 200 ಲಕ್ಷ ರೂಪಾಯಿಗಳವರೆಗೆ ಬಂಡವಾಳ ಹೂಡಿಕೆ

ಮಧ್ಯಮ ಉದ್ಯಮ : 200 ಲಕ್ಷ ರೂಪಾಯಿಗಳಿಂದ 500 ಲಕ್ಷ ರೂಪಾಯಿಗಳವರೆಗೆ ಬಂಡವಾಳ ಹೂಡಿಕೆ

ಬೃಹತ್ ಉದ್ಯಮ : ಅತೀ ಸಣ್ಣ, ಸಣ್ಣ, ಮಧ್ಯಮ ಪ್ರಮಾಣಗಳೆಂದು ವರ್ಗೀಕೃತ ಮಾಡಿಲ್ಲದ ಉದ್ಯಮಗಳು ಹಾಗೂ ರೂ.250 ಕೋಟಿವರೆಗೆ ಬಂಡವಾಳವಿರುವ ಉದ್ಯಮಗಳು.

**ಎಸ್.ಉಮಾದೇವಿ,**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**P.R. 752**
**S.C. 25**

## HOME SECRETARIAT

## PROCEEDINGS OF THE GOVERNMENT OF KARNATAKA

**Sub: Revised Scheme for surrender assimilation and rehabilitation of Left Wing Extremists into mainstream of society.**

**PREAMBLE**

1. In Karnataka, Naxal movement / Left Wing Extremism has been active in some areas that are remote and face deficit in social and economic infrastructure, unemployment, etc. This has influenced the unemployed youth to adopt left wing / extremist / naxal ideology. Government has put in constant efforts to help bring the misguided persons into the society. Government, have, therefore, adopted a surrender policy vide G.O. No. HD· 128 SST 2010, Bangalore dated 19/06/2010 to wean away the Naxal youth from their Extremist ideology and bring them to the mainstream. It is encouraging to affirm the fact that, so far, five Naxals including women have surrendered to the District Administration/State. The District Administration has responded effectively to their demands and has taken positive steps in rehabilitating them.

**2. OBJECTIVES**

The objective. of the scheme is to contain violence by Left Wing Extremists by weaning away misguided youth and hardcore Naxals who have strayed into the fold of Left Wing Extremism and find themselves trapped in their net. The Scheme seeks to ensure that Naxals, who have surrendered, do not revert back to extremism by providing them gainful employment and-entrepreneurial opportunities. The scheme also seeks to discourage tactical surrenders by those elements who try to make use of benefits extended by the Government under this scheme to further their interest.

**3**. The Government has also put efforts to ensure that the gaps in development are filled up, by initiating many programmes, projects, in affected areas like skill training programme, employment generating activities, construction of foot bridges, employed of locally qualified persons against existing vacancies of Health and Educations departments & so on.

4. At this juncture this policy needs to be suitably up-graded so as to encourage more number of Naxal / Left Wing Extremists to join the mainstream of society. By doing so, Government hopes that more and more Left Wing Extremists merge with the society and join hands with Government and society at large in constructive upliftment and development of remote areas .

Hence the following.

**GOVERNMENT ORDER NO. HD 128 SST 2010(PI), BANGALORE, DATED 09-09-2014**

Under the above mentioned circumstances in supersession of Government Order No.HD 128 SST 2010, Bangalore dated 19-06-2010, Government are pleased to formulate the following revised rehabilitation scheme in order to accept the surrender of Naxals/ Left Wing Extremist etc., and their associates and to rehabilitate them.

**1. DEFINITION -:**

**i)** "Left Wing Extremists"/ "Naxalites" /"Militants" / "Maoists" mean the cadres or / and members or and activists/ or /and operatives of those organization (s) / Outfit (s) declared as unlawful by the State Government under section 16 of The Criminal Law amendment Act, 1908 or by Government of India under the Unlawful Activities (Prevention) Act, 1967 as the case may be:

a. State Government means the Government of Karnataka,

b. Reference to "he" or "his" shall mean "She" or "her" also.

**2. ELIGIBILITY**

The scheme is applicable only to those militants / extremists / naxals / Left Wing supporters and activists associated with Left Wing Organizations and strong supporters of above mentioned activities who are willing to surrender with or without fire arms and who may have criminal records. They shall be categorized as follows:

**CATEGORY -A )** all identified members of above organizations and underground armed group members, Central, Regional!, State,_ District and area core-committee members of any or all or more of the above, groups and all such active underground members of the above categories involved in heinous crime or one or more criminal cases registered against them.

**CATEGORY-B)** all such supporters, keepers, couriers. arrested and releases underground members. informers to LWE members, groups. and persons contacted by leaders for recruitment.

**3. MECHANISM**

The surrender and rehabilitation policy will be executed by a DISTRICT COMMITTEE, constituted in each district of the region affected by LWE activities as follows:

| | |
|---|---|
| 1. District Magistrate | Chairman |
| 2. Chief Executive Officer of the Zilla Panchayat | Member |
| 3. District Social Welfare Officer | Member |
| 4. Superintendent of the District | Convener |

One member-of any civil-social organization; which is actively working at the grass root level in the affected area may be' nominated by the Deputy Commissioner and Superintendent of Police and this is optional.

The Surrender and Rehabilitation will be approved by a COMMITTEE AT THE STATE LEVEL. This Committee will! be chaired by the Chief Secretary and comprise the following:

| | |
|---|---|
| a) Home Secretary | Member |
| (b) D.G. and I.G.P. | Member |
| (c) Chief of State Intelligence | Member |
| (d) Head of ISD | Member |
| (e) Shri. H.S. Doreswarny, Freedom Fighter | Member |
| (f) Shri. A.K. Subbaiah, Senior Advocate | Member |
| (g) Smt. Gowri Lankesh, Senior Journalist | Member |
| (h) Deputy Inspector General of Police (ANF) | Convener |

Every surrendered extremist should satisfy the following criteria in order to become eligible for assistance for rehabilitation.

(a) He should reveal the real names and identify the activists / members/ associates of the militant organization (s) in which he has working / operating.

(b) He should reveal the real names of financers, couriers etc and other details of the organization including source of arms and ammunition.

(c) He should make a clear confession of the entire criminal acts committed by him. He should give all the relevant details of the violent incidents he had participated in, like the names of planner and other participants, firearms/ ammunition or property looted, distribution of arms and disposal of the property etc.

(d) He should make a public statement confession of his voluntary surrender through the media.

**7. PROCESS**

A proposal for surrender and consequent rehabilitation of the LWE group members will be placed, before the District Committee in proper format by an officer of the rank of Deputy Superintendent of Police. working in the LWE affected areas. It may also be initiated by any other officer or public individual but will be verified and forwarded by an officer of the rank of Deputy Superintendent of Police of the affected area. (Format is given in Appendix-I)

In cases where, a direct feeler is sent through any superior officer, public representative or members of the district or state committee, they will in turn assign an officer of the rank of Deputy Superintendent of Police of the affected area, to verify and forward the proposal.

In cases where initiation through the local police establishment is felt to be counter productive, the district committee will have the powers to waive the requirement for verification and initiation by Deputy Superintendent of Police through a special resolution and accept the proposal directly. In such cases, the District Superintendent of Police will present the proposal to the committee.

The District Committee, on receiving a proposal, will discuss the following issues:

(a) The eligibility of the surrendering person under a particular scheme .

(b) The utility of the surrender proposal to the objective of combating LWE activities.

(c) The rehabilitation scheme to be applied.

(d) Legal issues to be addressed.

The deliberations and resolution of the District Committee will be communicated to the DG& IGP, who will study and forward the proposal to the state committee.

**8. PROCEDURE**

After the approval of the proposal by which the surrender will be facilitated, the following process will be followed.

a. The surrendering LWE group member will surrender before one of the members or the District Committee.

b. The committee will ensure that the surrendered makes a public statement of voluntary surrender through the media.

c. A confession statement will be recorded in camera in which he/she discloses full information about the LWE activities in the region and name of all underground members, before the District Committee.

d. A surrender report will be prepared and placed before the District Committee (Appendix -2). The district committee, after accepting the same will forward it to the State Committee for approval.

e. After the surrender, the District Committee will resolve on the allotment and disbursal of benefits applicable.

f. The Committee will also appoint a Nodal Officer who will monitor the surrendered LWE group member for a period of two years. The Nodal Officer will submit a monthly monitoring report on the activities of the surrendered and rehabilitation process for a period of two years.

The Committee will maintain a list of persons who have been covered under this scheme. The monitoring report submitted by the Nodal Officer for each case will be compiled in a quarterly report, prepared by the convener of the District Committee (Appendix -3). This report will detail the list of persons who have been selected and rehabilitated under this scheme and also make specific observations on the progress of this policy in the combat of Maoist Naxal activities.

**9. BENEFITS**

**a) Grant -cum-loan:**

A composite grant-cum - loan of an amount of Rs.5 lakhs or the amount of reward announced on his/her capture, whichever is higher, will be released to the surrendering LWE group member. 50% of the amount will be a onetime grant and the other 50% will be sanctioned as loan through the District Cooperative Bank.

If the surrendered is willing to take up a trade or vocation for which he has an inclination or skill, a training stipend of Rs.5,000/- per month will be paid to him; after he enrolls in an accredited course. This will be for a maximum period of one year. A similar support will be extended for pursuit of formal education for two years.

If the surrendered is eligible for a land grant he will be encouraged to submit an application and the District Committee will recommend the case after monitoring the progress of the rehabilitation.

If the surrendered brings with him any weapon or equipment, the following incentives for each weapon or equipment will be paid

| Sl.No. | Weapon / Equipment | Revised Rate of Incentive (in Rs.) |
|---|---|---|
| (i) | AK 47/56/74 Rifle | **30,000 per weapon** |
| (ii) | UMG/IGPM/RPG/Sniper rifle | **50,000 per weapon** |
| (iii) | Pistol/Revolver | **10,000 per weapon** |
| (iv) | Rockets | **3,000 per weapon** |
| (v) | SAM Missiles | **40,000 per missile** |
| (vi) | Grenade/hand grenade/stick grenade | **2,000 per grenade** |
| (vii) | Explosive material | **4,000 per K.G.** |
| (viii) | Electronic Detonators<br>Other Detonators | **100**<br>**20** |
| (ix) | Mines | **6,000 per missile** |
| (x) | IED | **2,000 each** |
| (xi) | Satellite Phone | **20,000** |
| (xii) | VHF/HF Communication sets | **10,000** |
| (xiii) | Wireless Set<br>(a) Short Range<br>(b) Long Range | <br>**2,000 per set**<br>**10,000 per set** |
| (xiv) | Ammunition of all types | **100 per round** |
| (xv) | Remote Control Device | **6,000 per device** |

**b) Additional incentives**

If the surrendering LWE group member provides the following types of actionable information, additional incentives may be given: -

(i) Information leading to the capture **or surrender** of another LWE dalam or underground member.

(ii) Information leading to the detection of arms dump.

An additional incentive which is not more than 20% of either a cash reward against the dalam member, **(in case of capture only)** or total value of the arms dump may be considered by the State Committee.

**c) Support Scheme:**

In cases where a member of an underground group who is not included in any list nor named in the criminal cases, but associated with **left wing ideologies / naxals,** expresses a desire to surrender, he will be considered under the Surrender Support Scheme. The benefits will be as follows;

(i) A monthly stipend of Rs.5,000/- for a period of one year, for any vocational or skill training course that he will enroll into. A similar support will be extended for formal education for two years.

(ii) If he surrenders with any weapon or equipment, an incentive for each weapon or equipment will be paid as detailed above. -

**d) Leverage Scheme**

The combat of LWE activities involves the conversion of active over ground supporters, identification of vulnerable persons who have been approached for recruitment and restraint of LWEs who have been arrested and later released. The effort is to rope in these persons into the State sponsored development process. The District Committee will consider and deliberate upon the possibility of exerting countervailing pressure on L WE activities like recruitment, propaganda etc by the following means:

(i) Address grievances and remedy problems of all the persons who are tapped by LWE groups for recruitment

(ii) Address the issues and take up dialogue with over-ground supporters who have been mislead into conducting propaganda against the State.

(iii)Provide support and any special help to LWE members who have been released from custody and are likely to rejoin the movement.

All proposals to be covered under the leverage scheme will be placed before the District Committee.

in assigning the specific benefits under the different schemes the District Committee will consider the socio-economic background of the surrendered supporter or vulnerable person. The preference of the rehabilitated person and the utility of the benefits as a deterrent against further influence of LWE propaganda will be factored.

**10) CUSTODY OF SURRENDERED WEAPONS:**

The Superintendent of Police of the concerned district will be the custodian in respect of safe storage of weapons and ammunition surrendered by the naxalites.

**11) CRIMINAL CASES:**

Heinous crimes committed by the surrendered will continue in the courts State Government may, however, consider withdrawing cases pending against minor offences committed by the surrendered. State Government may provide free legal services/advocate to the surrendered Naxal. Fast track courts may be constituted by the State Government for speedy trial of cases against the surrendered.

**12)** The benefits of this scheme will be extended retrospectively to the naxals who have already surrendered.

**13)** The State Government may review the working of this scheme annually and may modify its provisions as considered necessary.

This Order issues with the concurrence of the Finance Department.

**GOVINDASWAMY**
Under Secretary to Government
Home Department (Law and Order).

**APPENDIX-I**

**SURRENDER PROPOSAL**

**PART- I**

- Name and personal particulars of the surrenderee.
- Details of activities and affiliations.
- Reference in lists/ documents maintained by different agencies.
- Details of involvement in criminal cases.
- Note on origin and credibility of surrender proposal.

**PART - II**

• Eligible scheme and benefits to be assigned.

• Other requirements of the surrenderee.

• Preliminary note on information potential.

• Note on utility of surrender. ..

**PART-III**

• Recommendation of the Initiating Officer.

**PART- IV**

• Resolution of the District Committee on the following:

i. Scheme to be assigned

ii. Specific benefits to be allotted .

iii. Utility of the surrender

iv. Legal issues involved

**PART- V**

- Decision of the Monitoring Committee on the following:
  - v Approval of the scheme
  - vi Approval of the benefits
  - vii Initiation of process of withdrawal of cases

**APPENDIX-2**

**SURRENDER REPORT**

**Part I**

• Full biographical profile of the surrendering LWE member:

• Proceedings of the surrender process.

• Remarks of the Officer before whom the surrender has taken place.

• Name and details of the Nodal Officer.

•. Type of .the scheme and benefits allotted.

• Note on conditions and safeguards ensured from the surrenderee.

• Note on additional items of information provided by the surrenderee.

**ANNEXURES**

• Voluntary Statement of the surrenderee released to the media.

• Copy of the voluntary statement of confession.

• Photographs / recordings of the surrender process .

**APPENDIX-3**

**QUARTERLY MONITORING REPORT**

**PART- I**

• List of persons under the three schemes who have been rehabilitated / supported / leveraged. .

**PART - II**

• Progress in each case in terms of the following

a. Provision of allotted benefits.

b. Conduct of the surendere.

c. Utilization of information provided by the surrendered person

**PART- III**

• Overall progress of the different surrender and rehabilitation schemes.

• Summary of the monitoring reports of the Nodal Officers assigned to each person.

**P.R.756**

**S.C. 500**

**GOVINDASWAMY**
Under Secretary to Government
Home Department (Law and Order).

# ENERGY SECRETARIAT

## PROCEEDINGS OF THE GOVERNMENT OF KARNATAKA

**Sub:** Modification to Government Order regarding fixation of pension Gratuity & Leave encashment payable to Members of KERC on retirement

**Read:** 1. G.O. No: EN 55 PSR 2013 dtd: 31.10.2013.

2. G. O. No: EN 55 PSR 2013 dtd: 31.10.2013.

3. KERC/A/20/0/2013-14/1215 dated: 11.11.2013.

**PREAMBLE**

1. In the above read G.O (1) & (2) Pension, Gratuity & Leave Salary was sanctioned to (1) Sri. Vishwanath Hiremath (2) Sri. K. Srinivas Rao, both retired members of Karnataka Electricity Regulatory Commission, as hereunder.

| Sl.No | Retirement benefits | Sri. Vishwanath Hiremath | Sri. K. Srinivas Rao |
|---|---|---|---|
| 1 | Pension | Rs.14,313.00 p.m | Rs.14,313.00 p.m |
| 2 | Gratuity | Rs.1,35,680.00 | Rs.1,62,033.00 |
| 3 | Leave encashment | Rs.5,05,835.00 | Rs.3,73,325.00 |

2. In the above read (3) Sri. Vishwanath Hiremath and Sri K Srinivas Rao, both retired members have represented to the Government to compute the Pension DCRG & Leave Salary on the original basic pay without reducing it by the pension already drawn for the erstwhile service. They have also requested for sanction of Dearness Allowance on pension.

3. As per Rules 6 (6) of Karnataka Electricity Regulatory Commission (Chairman and other Members Remuneration, Allowance and Conditions of Service) Rules 2000 and as amended from time to time, His Excellency the Governor of Karnataka is the Competent authority for granting pension, gratuity and leave salary to Chairman and other Members of the Karnataka Electricity Regulatory Commission. After the detailed examination of the issue approval is accorded for revision of Pension, DCRG & Leave Salary which is detailed below;

| Sl.No | Retirement benefits | Sri. Vishwanath Hiremath | Sri. K. Srinivas Rao |
|---|---|---|---|
| 1 | Pension | Rs.14,313.00 p.m | Rs.14,313.00 p.m |
| 2 | Gratuity | Rs.266667.00 | Rs.266667.00 |
| 3 | Leave encashment | Rs. 760000.00 | Rs.648533.00 |
| | **Total** | **Rs. 1040980.00** | **Rs.929513.00** |

Hence this Order.

**GOVERNMENT ORDER No. EN 55 PSR 2013 BANGALORE, DATED: 20th August 2014**

1. In the circumstances explained in the preamble, the Government is pleased to accord approval for the payment of Dearness allowance on pension and to compute the Pension, DCRG & Leave Salary on the original basic pay without reducing the basic pay by the pension already drawn for the erstwhile service rendered by the members of KERC. The Revised Pension, DCRG and Leave Salary admitted for payment to retired members of KERC are detailed below :-

| Names | Sri. Vishwanath Hiremath | Sri. K. Srinivas Rao |
|---|---|---|
| Pension | Rs.14,313.00 p.m | Rs.14,313.00 p.m |
| Plus: Admissible DA on Pension | | |
| DCRG | Rs.266667.00 | Rs.266667.00 |
| Leave Salary | Rs. 760000.00 | Rs.648533.00 |
| **Total** | **Rs. 1040980.00** | **Rs.929513.00** |

**Note: The Amount already paid vide G.O.No: EN 55 PSR 2013 dtd: 31.10.2013 has to be deducted while admitting the revised claims.**

2. This Order is issued with the concurrence of Finance Department vide Note No: FD 420 Exp-1/2014 dtd: 29.05.2014 and approval of His Excellency the Governor of Karnataka vide Submission Note No: EN 55 PSR 2013 dated 26.07.2014, on 05.08.2014.

By Order and in the name of Governor of Karnataka,

**A.A. CHAPPARBAND,**

Under Secretary to Government,

Energy Department.

**P.R.761**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ: ಗ್ರಾಅಪ/03/ಗಣಕ ಕೋಶ – 2013, ಬೆಂಗಳೂರು, ದಿನಾಂಕ: 30–06–2014.**

ಕರ್ನಾಟಕದ ಎಲ್ಲಾ 5629 ಗ್ರಾಮ ಪಂಚಾಯತಿಗಳನ್ನು ಆಪ್ಟಿಕಲ್ ಫೈಬರ್ ಸಂಪರ್ಕ ಜಾಲದಲ್ಲಿ ಸೇರಿಸುವ ಯೋಜನೆಯ ಕಾರ್ಯವನ್ನು ಭಾರತ ಸರ್ಕಾರದ ಬೆಂಬಲದೊಂದಿಗೆ ಭಾರತ್ ಬ್ರಾಡ್‌ಬ್ಯಾಂಡ್ ನಿಗಮದಿಂದ ಕೈಗೊಳ್ಳಲು ಕರ್ನಾಟಕ ಸರ್ಕಾರವು MoU No.NOFN/RoW-13dtd.26-10-2012 ಒಡಂಬಡಿಕೆಯಂತೆ Right of Way ಅನುಮತಿಯನ್ನು ನೀಡಲು ಒಪ್ಪಿರುತ್ತದೆ.

ಈ MoU ಪ್ರಕಾರ ರಾಜ್ಯ ಸರಕಾರದ ಇಲಾಖೆ ಮತ್ತು ಗ್ರಾಮ ಪಂಚಾಯತ್‌ಗಳಿಗೆ ಬ್ರಾಡ್‌ಬ್ಯಾಂಡ್ ಸಂಪರ್ಕ ನೀಡಲು ಭಾರತ್ ಬ್ರಾಡ್‌ಬ್ಯಾಂಡ್ ನಿಗಮದಿಂದ ನಿರ್ಮಿಸಲಾಗುವ ರಾಷ್ಟ್ರೀಯ ಆಪ್ಟಿಕಲ್ ಫೈಬರ್ ಸಂಪರ್ಕಜಾಲದ ಮೂಲಕ ಮಾಹಿತಿ ಹೆದ್ದಾರಿಯನ್ನು ರಚಿಸುವ ಸಲುವಾಗಿ ಅಧೀನ ಕಛೇರಿಗಳು/ಸ್ಥಳೀಯ ಸಂಸ್ಥೆಗಳು ಮತ್ತು ರಾಜ್ಯ ಸರಕಾರಿ ಸ್ವಾಮ್ಯದ PSU ಮತ್ತು ಏಜೆನ್ಸಿಗಳಿಂದ Right of Way ಶುಲ್ಕ ಮತ್ತು ರಸ್ತೆಯ ಪುನರ್‌ಉತ್ಥಾನಕ್ಕಾಗಿ ಶುಲ್ಕವನ್ನು ವಿಧಿಸಲಾಗುವುದಿಲ್ಲ.

ಗ್ರಾಮ ಪಂಚಾಯಿತಿಗೆ ಸಂಪರ್ಕ ಕಲ್ಪಿಸಲು ವಿದ್ಯುತ್ ಸರಬರಾಜು ಮಾಡುವ ಕಂಪನಿಗಳು ತಮ್ಮ ವಿದ್ಯುತ್ ಸಾಗಿಸುವ ಲೈನ್‌ಗಳು, ಉಪ ಲೈನ್‌ಗಳು, ವಿತರಿಸುವ ಲೈನ್‌ಗಳೊಂದಿಗೆ OPGW/ADSS ಆಪ್ಟಿಕಲ್ ಫೈಬರ್ ಕೇಬಲ್‌ಗಳನ್ನು ಹಾಕಲು ಈ ನೋಟಿಫಿಕೇಶನ್ ಪ್ರಕಾರ ಯಾವುದೇ ಶುಲ್ಕವನ್ನು ತೆಗೆದುಕೊಳ್ಳದೆ ಗ್ರಾಮ/ತಾಲ್ಲೂಕು/ಜಿಲ್ಲಾ ಪಂಚಾಯಿತಿಗಳು ಅನುಮತಿಯನ್ನು ನೀಡಬೇಕು. ಈ ನೋಟಿಫಿಕೇಶನ್ ಪ್ರಕಾರ ಭಾರತ್ ಬ್ರಾಡ್‌ಬ್ಯಾಂಡ್ ನಿಗಮಕ್ಕೆ ಕೇಬಲನ್ನು ಹಾಕಲು, ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಮಾಡಲು ಸಂಪೂರ್ಣ ಅಧಿಕಾರವನ್ನು ನೀಡಲಾಗಿದೆ ಮತ್ತು ಯಾವುದೇ ಗ್ರಾಮ ಪಂಚಾಯಿತಿಯಿಂದ Right of Way ಅನುಮತಿಯ ಅವಶ್ಯಕತೆ ಇರುವುದಿಲ್ಲ. ಭಾರತ್ ಬ್ರಾಡ್‌ಬ್ಯಾಂಡ್ ನಿಗಮಕ್ಕೆ ನೀಡಲಾದ ಈ ನೋಟಿಫಿಕೇಶನ್ ನಿಯಮಾನುಸಾರ ಯಾವುದೇ ವಿಳಂಬವಿಲ್ಲದೆ ಪಂಚಾಯತಿಗಳಿಗೆ ಅನ್ವಯವಾಗುತ್ತದೆ.

**ಟಿ.ಎಂ.ವಿಜಯ ಭಾಸ್ಕರ್,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

P.R. 764
S.C. 25

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಲೋಕಸೇವಾ ಆಯೋಗದ ವಿಷಯಗಳನ್ನು ನಿರ್ವಹಿಸಲು ಸಿ.ಆ.ಸು.ಇ.(ಸೇವೆಗಳು–7)ಗೆ ಮತ್ತೊಂದು ಶಾಖೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 762 ಸಅಸೇ 2013; ದಿನಾಂಕ: 17–10–2013.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 762 ಸಅಸೇ 2013; ದಿನಾಂಕ: 23–12–2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ವಿಷಯಗಳನ್ನು ನಿರ್ವಹಿಸಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಸೇವೆಗಳು) ವಿಭಾಗದಡಿ ಹೊಸದಾಗಿ ಒಂದು ಅಧೀನ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ ಹಾಗೂ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿ ಸದರಿ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲಾಗಿದೆ.

ಸರ್ಕಾರವು 2011ರ ಕೆ.ಪಿ.ಎಸ್.ಸಿ ಪರೀಕ್ಷೆಯಲ್ಲಿನ ಅವ್ಯವಹಾರದ ಕುರಿತಂತೆ 2011ರ ಗೆಜೆಟೆಡ್ ಪ್ರೊಬೇಷನರ್‌ಗಳ ನೇಮಕಾತಿ ಪ್ರಕ್ರಿಯೆಯನ್ನು ಮುಕ್ತಾಯಗೊಳಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53 ಸೇಲೋಸೇ 2014, ದಿನಾಂಕ: 14–08–2014ರಲ್ಲಿ ಆದೇಶಿಸಿದ್ದು, ಈ ಬಗ್ಗೆ ಆಯ್ಕೆಯಾಗಿದ್ದ ಅಭ್ಯರ್ಥಿಗಳು ಮಾನ್ಯ ಕೆ.ಎ.ಟಿ ಮತ್ತು ಗೌರವಾನ್ವಿತ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮುಂದುವರೆದು, 1998, 1999, 2004 ಮತ್ತು 2010ನೇ ಸಾಲಿನ ಕೆ.ಪಿ.ಎಸ್.ಸಿ.ಪರೀಕ್ಷೆಯಲ್ಲಿ ಆಯ್ಕೆಗೊಳ್ಳದ ಬಾಧಿತ ಅಭ್ಯರ್ಥಿಗಳು ಪ್ರತ್ಯೇಕವಾಗಿ ವಿವಿಧ ನ್ಯಾಯಾಲಯಗಳಲ್ಲಿ (ಮಾನ್ಯ ಕೆ.ಎ.ಟಿ., ಮಾನ್ಯ ಉಚ್ಚ ನ್ಯಾಯಾಲಯ, ಮಾನ್ಯ ಸರ್ವೋಚ್ಚ ನ್ಯಾಯಾಲಯ) ಅರ್ಜಿ ದಾಖಲಿಸಿದ್ದು ಸದರಿ ಪ್ರಕರಣಗಳಲ್ಲಿ ಸರ್ಕಾರದ ವತಿಯಿಂದ ಅಫಿಡೆವಿಟ್‌ಗಳನ್ನು ಪ್ರಮಾಣೀಕರಿಸಬೇಕಾಗುತ್ತದೆ. ಈ ಸಂಬಂಧವಾಗಿ ಸದರಿ ನ್ಯಾಯಾಲಯಗಳಲ್ಲಿ ವಿಚಾರಣೆ ನಡೆಯುತ್ತಿದ್ದು ಇನ್ನೂ ಇತ್ಯರ್ಥಗೊಂಡಿರುವುದಿಲ್ಲ ಹಾಗೂ ಸದರಿ ದಾವೆಗಳು ಆಗಿಂದಾಗ್ಗೆ ವಿಚಾರಣೆಗೆ ಬರುವುದರಿಂದ ಕೂಡಲೇ ಕ್ರಮವಹಿಸಬೇಕಾಗುತ್ತದೆ. ಇದರಿಂದಾಗಿ ಪ್ರಸ್ತುತ ಮಂಜೂರಾಗಿರುವ ಸಿಬ್ಬಂದಿಗೆ ಕೆಲಸದ ಒತ್ತಡ ತೀವ್ರ ಹೆಚ್ಚಾಗಿದ್ದು ಕಾರ್ಯ ನಿರ್ವಹಿಸಲು ಕಷ್ಟಸಾಧ್ಯವಾಗುತ್ತಿದೆ. ಈ ರೀತಿಯ ದಾವೆಗಳು ಇನ್ನು ಮುಂದೆ ಹೆಚ್ಚಾಗುವ ಸಂಭವವಿರುತ್ತದೆ.

ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ನೇರ ನೇಮಕಾತಿ ಕುರಿತಂತೆ 2012, 2013ನೇ ಸಾಲುಗಳಿಗೆ ಸಂಬಂಧಿಸಿದಂತೆ ಲಭ್ಯವಾಗುವ ಹುದ್ದೆ/ಮೀಸಲಾತಿ ಹಾಗೂ ರಿಕ್ತ ಸ್ಥಾನಗಳ ಬಗ್ಗೆ ಎಲ್ಲಾ ಇಲಾಖೆಗಳಿಂದ ಮಾಹಿತಿಗಳನ್ನು ಕ್ರೋಢೀಕರಿಸಿ, ಅಧಿಸೂಚನೆಗಳನ್ನು ಹೊರಡಿಸಬೇಕಾಗುತ್ತದೆ ಹಾಗೂ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದೊಂದಿಗೆ ಸಮಾಲೋಚಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನ್ಯಾಯಾಲಯಗಳ ಪ್ರಕರಣಗಳ ಜೊತೆಗೆ ಕರ್ನಾಟಕ ಲೋಕಸೇವಾ ಆಯೋಗದ ದೈನಂದಿನ ವಿಷಯಗಳ ಸಮರ್ಥ ನಿರ್ವಹಣೆಗಾಗಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಒಂದು ಅಧೀನ ಕಾರ್ಯದರ್ಶಿ ಮತ್ತು ಒಂದು ಶಾಖೆಯೊಂದಿಗೆ ಮತ್ತೊಂದು ಶಾಖೆಯನ್ನು ಪೂರಕ ಹುದ್ದೆಗಳೊಂದಿಗೆ ಸೃಜಿಸಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಆರ್ಥಿಕ ಇಲಾಖೆಯು ಒಟ್ಟು 07 ಹುದ್ದೆಗಳನ್ನು ಸೃಜಿಸಲು ಸಹಮತಿಯನ್ನು ನೀಡಿರುತ್ತದೆ. ಅದರಂತೆ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 762 ಸಅಸೇ 2013 ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ವಿಷಯಗಳ ಸಮರ್ಥ ನಿರ್ವಹಣೆಗಾಗಿ ಈಗಾಗಲೇ ಮಂಜೂರಾಗಿರುವ ಒಂದು ಅಧೀನ ಕಾರ್ಯದರ್ಶಿ ಮತ್ತು ಒಂದು ಶಾಖೆಯೊಂದಿಗೆ ಕಾರ್ಯನಿರ್ವಹಿಸುತ್ತಿರುವ ಸಿ.ಆ.ಸು.ಇ.(ಸೇವೆಗಳು–7) ವಿಭಾಗಕ್ಕೆ ಮತ್ತೊಂದು ಶಾಖೆಯನ್ನು ಈ ಕೆಳಕಂಡ ಪೂರಕ ಹುದ್ದೆಗಳೊಂದಿಗೆ ಸೃಜಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಗಳು | ಹುದ್ದೆಗಳ ಸಂಖ್ಯೆ |
|---|---|---|
| 1. | ಶಾಖಾಧಿಕಾರಿ | 01 |
| 2. | ಹಿರಿಯ ಸಹಾಯಕ | 01 |
| 3. | ಸಹಾಯಕ | 02 |
| 4. | ಕಿರಿಯ ಸಹಾಯಕ | 01 |
| 5. | ಬೆರಳಚ್ಚುಗಾರ | 01 |
| 6. | ದಲಾಯತ್ | 01 |
| | ಒಟ್ಟು | 07 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 788 ವೆಚ್ಚ–12/2014, ದಿನಾಂಕ:22–09–2014ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

**P.R. 766**

## PERSONNEL AND ADMINISTRATIVE REFORMS SECRETARIAT

**Sub:** Writing of Performance Appraisal Report- determination of Authorities- reg.

**Read:**
1. Government order No. DPAR 137 SPS 2009, dated: 23-10-2009 and 22-04-2010.
2. Government order No. DPAR 221 SPS 2010, dated: 21-12-2010.
3. Letter No. NGO (1)/125/96-97, dated: 29-04-2014 of DG & IGP (HoPF), Bangalore.

**PREAMBLE**

In the Government Orders dated: 23-10-2009, 22-04-2010 and 21-12-2010 read at (1) and (2) above, the State Government have prescribed the Reporting, Reviewing and Accepting Authorities in respect of various categories of posts held by IPS officers of Karnataka in Police Departments and in Non-Police Organizations in the State. In the letter read at (3) above, the DG & IGP (HoPF) has requested that consequent upon creation of certain new posts by the Ministry of Home Affairs, Government of India and State Government appropriate authorities have to be prescribed to write their Performance Appraisal Reports (PAR) and State Government. Hence the following order.

**GOVERNMENT ORDER NO. DPAR 83 SPS 2014, BANGALORE, DATED 08-08-2014.**

In continuation of Government order No. DPAR 137 SPS 2009, dated: 23-10-2009, 22-04-2010 and Government order No. DPAR 221 SPS 2010, dated: 21-12-2010 read at (1) and (2) above and in exercise of powers conferred under Rule 5(1) of AIS (PAR) Rules, the State Government hereby prescribe the Reporting, Reviewing and Accepting Authorities in respect of following posts for the purpose of writing PARs.

| Sl.No. | Name of the Post | Reporting Authority | Reviewing Authority | Accepting Authority |
|---|---|---|---|---|
| 1. | Addl. Director General of Police, Bangalore Metropolitan Task Force. | Additional Chief Secretary, Urban Development Dept. | Chief Secretary | Minister concerned |
| 2. | Inspector General of Police & Addl. Commissioner of Police, Crimes, Bangalore City. | Commissioner of Police, Bangalore City. | DG & IGP | Chief Secretary |
| 3. | Inspector General of Police, Special Investigation Team, Lokayukta, Bangalore. | Lokayukta | Lokayukta | Lokayukta |

| Sl.No. | Name of the Post | Reporting Authority | Reviewing Authority | Accepting Authority |
|---|---|---|---|---|
| 4. | Commissioner of Police, Belgaum City. | ADGP, L & O | DG & IGP | Chief Secretary |
| 5. | Deputy Inspector General & Joint Commissioner of Police, Law & Order (East), Bangalore City. | Addl. Commissioner of Police, L & O | Commissioner of Police, Bangalore City. | DG & IGP |
| 6. | Deputy Inspector General & Joint Commissioner of Police, Law & Order (West), Bangalore City. | Addl. Commissioner of Police, (L & O). | Commissioner of Police, Bangalore City. | DG & IGP |
| 7. | Deputy Inspector General of Police, Special Investigation Team, Karnataka Lokayukta. | IGP, Special Investigation Team, Karnataka Lokayukta. | Lokayukta | Lokayukta |
| 8. | Asst. Inspector General of Police, HQrs, Chief Office, Bangalore. | IGP, HQ-1, Bangalore | ADGP, Admin | DG & IGP |
| 9. | Dy.Commissioner of Police, Crime-2, Bangalore City. | Jt. Commissioner of Police, Crime. | Addl. Commissioner of Police, Crime | Commissioner of Police, Bangalore |
| 10. | Deputy Commissioner of Police, Law & Order, Belgaum City. | Commissioner of Police, Belgaum City. | ADGP, L & O | DG & IGP |
| 11. | Superintendent of Police, Special Investigation Team, Karnataka Lokayukta. | DIGP, Special Investigation Team, Karnataka Lokayukta. | IGP, Special Investigation Team, Karnataka Lokayukta. | Lokayukta |

This order shall be applicable to PARs for the reporting year 2013-14 (ending 31-03-2014) & onwards.

By Order and in the name of the Governor of Karnataka,
**J.D.Madhuchandra Tejaswi,**
Under Secretary to Government,
DP & AR (Services-IV).

**P.R.767**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಕಸಂವಾ 43 ಕಸನಿ 2013(ಭಾ), ಬೆಂಗಳೂರು, ದಿನಾಂಕ: 01-08-2014**

ಕನ್ನಡ ತಂತ್ರಾಂಶ ಅಭಿವೃದ್ಧಿಗೆ ಸಂಬಂಧಿಸಿದಂತೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪರಿವರ್ತಕಗಳು, ಯೂನಿಕೋಡ್ ಅಕ್ಷರ ವಿನ್ಯಾಸಗಳು, ಮೊಬೈಲ್ ದೂರವಾಣಿ, ಬ್ರೈಲ್ ಕನ್ನಡ ತಂತ್ರಾಂಶಗಳನ್ನು ಅಭಿವೃದ್ಧಿ ಪಡಿಸಿದ್ದು, ಇವುಗಳ ಅಂತಿಮ ಆವೃತ್ತಿಯನ್ನು www.karnataka.gov.in/kcit ವೆಬ್‌ಸೈಟ್‌ನಲ್ಲಿ ಅಳವಡಿಸಲಾಗಿದೆ. ಸದರಿ ತಂತ್ರಾಂಶಗಳನ್ನು ಬಳಸಿಕೊಂಡು ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳು ಆಯಾ ಇಲಾಖೆಗಳ ಪತ್ರ ನಿರ್ವಹಣೆ ವ್ಯವಸ್ಥೆ (ಎಲ್.ಎಂ.ಎಸ್) ಕಡತ ನಿರ್ವಹಣೆ ವ್ಯವಸ್ಥೆ (ಎಫ್.ಎಂ.ಎಸ್) ಗಳನ್ನು ಯೂನಿಕೋಡ್ ತಂತ್ರಾಂಶದ ಮೂಲಕ ನಿರ್ವಹಿಸುವಂತೆ ಸೂಚಿಸಿದೆ.

**ಡಾ॥ ಶಾಲಿನಿ ರಜನೀಶ್,**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

**P.R. 768**
**S.C. 100**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 67 ಮುಸರ 2007, ದಿನಾಂಕ: 10-10-2008.

2. ಸರ್ಕಾರದ ಆದೇಶ ಸಂಖ್ಯೆ: ಕಂಇ 61 ಮುಆಬಿ 2013, ದಿನಾಂಕ: 17-01-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 10-10-2008ರಲ್ಲಿ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ವಿಧಾನಸಭಾ ಕ್ಷೇತ್ರವಾರು ಆರಾಧನಾ ಸಮಿತಿಗಳನ್ನು ರಚಿಸಲು ಮಾರ್ಗಸೂಚಿಯನ್ನು ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ:17-01-2014ರಲ್ಲಿ ರಾಜ್ಯದ ಎಲ್ಲಾ ವಿಧಾನಸಭಾ ಕ್ಷೇತ್ರಗಳಿಗೆ ಆಯಾಯ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರನ್ನು ಅಧ್ಯಕ್ಷರನ್ನಾಗಿ ಹಾಗೂ ಅಧಿಕಾರಿಗಳನ್ನೊಳಗೊಂಡ ಆರಾಧನಾ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

ಅದರಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಮುಸರ 2013 (ಭಾ–1); ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ನಾಲ್ಕು ಜನ ಅಧಿಕಾರೇತರ ಸದಸ್ಯರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

| | | |
|---|---|---|
| 1 | ಶ್ರೀ ಮಹೇಶ್ ಬಿನ್ ಚನ್ನವೀರಯ್ಯ, ದೊಡ್ಡಬೆಳವಂಗಲ ಗ್ರಾಮ, ದೊಡ್ಡಬಳ್ಳಾಪುರ ತಾಲ್ಲೂಕು **(ಸಾಮಾನ್ಯ)** | ಸದಸ್ಯರು |
| 2 | ಶ್ರೀಮತಿ ಗಂಗಮ್ಮ ಕೋಂ ಸೋಮಶೇಖರ್, ಹುಲಿಕುಂಟೆ ಗ್ರಾಮ, ದೊಡ್ಡಬಳ್ಳಾಪುರ ತಾಲ್ಲೂಕು **(ಮಹಿಳೆ)** | ಸದಸ್ಯರು |
| 3 | ಶ್ರೀ ಮಂಜುನಾಥ ಎಂ., ಬಿನ್ ಮಲ್ಲಯ್ಯ, ರಾಮದೇವನಹಳ್ಳಿ, ಕನ್ನಮಂಗಲ ಅಂಚೆ, ಮಧುರೆ ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು **(ಪರಿಶಿಷ್ಟ ಜಾತಿ)** | ಸದಸ್ಯರು |
| 4 | ಶ್ರೀ ಮಾರಪ್ಪ ಕೋಂ ಮುನಿಯಪ್ಪ, ಮೋಪರಹಳ್ಳಿ ಕೊನಘಟ್ಟ ಪಂಚಾಯತಿ, ದೊಡ್ಡಬಳ್ಳಾಪುರ ತಾಲ್ಲೂಕು **(ಪರಿಶಿಷ್ಟ ಪಂಗಡ)** | ಸದಸ್ಯರು |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಟಿ.ಜಯರಾಮೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

P.R. 769
S.C. 25

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ವಿ.ಮುನಿಯಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಾಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತಾಂತ್ರಿಕ ಉನ್ನತೀಕರಣ ಪರಿಷತ್ತು, ಬೆಂಗಳೂರು ಇವರ ವಿರುದ್ಧ ದಾಖಲಾದ ಲೋಕಾಯುಕ್ತ ದಾಳಿ ಪ್ರಕರಣದ ಮೇಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ–ಆದೇಶ

**ಓದಲಾಗಿದೆ :** ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಪತ್ರದ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.31/2014, ದಿನಾಂಕ: 25.07.2014.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಆರೋಪಿಯಾದ ಶ್ರೀ ವಿ.ಮುನಿಯಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಾಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತಾಂತ್ರಿಕ ಉನ್ನತೀಕರಣ ಪರಿಷತ್ತು, ಬೆಂಗಳೂರು ಇವರ ವಿರುದ್ಧ ದಾಖಲಾದ ಧಾಳಿ ಪ್ರಕರಣದ ಮೇಲೆ, ಇವರನ್ನು ಅಮಾನತ್ತುಗೊಳಿಸುವ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರಿಂದ ವರದಿಯಾದಂತೆ ಸದರಿ ಅಧಿಕಾರಿಯು ಮೂಲ ಆದಾಯಕ್ಕಿಂತ ಹೆಚ್ಚಿನ ಅಕ್ರಮ ಸಂಪತ್ತು ಹೊಂದಿರುತ್ತಾರೆ ಎಂಬ ನಂಬಲರ್ಹವಾದ ಮಾಹಿತಿಯ ಆಧಾರದ ಮೇಲೆ ಇವರ ವಿರುದ್ಧ ಬೆಂಗಳೂರು ನಗರ ಲೋಕಾಯುಕ್ತ ಪೋಲೀಸ್ ಠಾಣಾ ಮೊಕದ್ದಮೆ ಸಂಖ್ಯೆ: 31/2014ರಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988 ರ ಕಲಂ 13(1) (ಇ) ಸಹವಾಚನ 13(2) ಅನ್ವಯ ದಿನಾಂಕ: 15.07.2014 ರಂದು ಪ್ರಕರಣ ದಾಖಲಿಸಿಕೊಂಡು, ನ್ಯಾಯಾಲಯದಿಂದ ಅಗತ್ಯ ಶೋಧನಾ ವಾರೆಂಟ್‌ಗಳನ್ನು ಪಡೆದುಕೊಂಡು ದಿನಾಂಕ: 16.07.2014 ರಂದು ಆರೋಪಿತರ ವಾಸದ ಮನೆ, ಕಛೇರಿ ಹಾಗೂ ಬ್ಯಾಂಕ್ ಲಾಕರ್‌ಗಳನ್ನು ಪಂಚರ ಸಮಕ್ಷಮ ಶೋಧನೆ ಮಾಡಿ, ಪ್ರಕರಣದ ತನಿಖೆಗೆ ಪೂರಕವಾದ ಚರ ಮತ್ತು ಸ್ಥಿರಾಸ್ತಿಗಳ ಸಂಬಂಧಿತ ದಾಖಲಾತಿಗಳನ್ನು ವಶಪಡಿಸಿಕೊಂಡಿರುತ್ತಾರೆ.

ಆರೋಪಿತ ಅಧಿಕಾರಿಯ ವಿರುದ್ಧ ಧಾಳಿ ಮಾಡಿದ ಸಮಯದಲ್ಲಿ ವಶಪಡಿಸಿಕೊಳ್ಳಲಾದ ಚರ ಮತ್ತು ಸ್ಥಿರಾಸ್ತಿಗಳ, ವಾಹನಗಳ ವಿವರ, ಬ್ಯಾಂಕ್ ಖಾತೆಗಳ ವಿವರ ಮತ್ತು ಸ್ಥಿರ ಠೇವಣಿಗಳ ವಿವರಗಳು, ಆರೋಪಿತರ ಮತ್ತು ಅವರ ಕುಟುಂಬದವರ ಖರ್ಚಿನ ವಿವರಗಳು, ಆರೋಪಿತರ ಕುಟುಂಬದ ಸದಸ್ಯರು ಹೊಂದಿರುವ ಆದಾಯದ ವಿವರ ಇವುಗಳ ಮಾಹಿತಿಯನ್ನು ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ನೀಡಿದ್ದು, ಪ್ರಾಥಮಿಕ ತನಿಖೆಯಿಂದ ಆರೋಪಿತರು ಗಳಿಸಿರುವ ಅಕ್ರಮ ಆಸ್ತಿಯ ವಿವರ ಕೆಳಕಂಡಂತೆ ನೀಡಲಾಗಿದೆ.

| ಕ್ರ.ಸಂ | ವಿವರ | ಮೌಲ್ಯ ರೂ ಗಳಲ್ಲಿ |
|---|---|---|
| 1. | ಆರೋಪಿತರು ಈವರೆವಿಗೆ ಗಳಿಸಿರುವ ಒಟ್ಟು ಆಸ್ತಿಯ ಮೊತ್ತ | ರೂ. 3,20,22,061–00 |
| 2. | ಆರೋಪಿತರು ಈವರೆಗೆ ಮಾಡಿರುವ ಖರ್ಚಿನ ಮೊತ್ತ | ರೂ. 1,33,00,000–00 |
| 3. | ಆರೋಪಿತರ ಆದಾಯದ ಮೊತ್ತ | ರೂ. 2,10,00,000–00 |
| 4. | ಆರೋಪಿತರು ಈವರೆವಿಗೆ ಗಳಿಸಿದ ಆದಾಯಕ್ಕಿಂತ ಹೆಚ್ಚಿನ ಆಸ್ತಿಯ ಮೊತ್ತ | ರೂ. 2,43,22,061–00 |
| 5. | ಆದಾಯಕ್ಕಿಂತ ಗಳಿಸಿರುವ ಹೆಚ್ಚಿನ ಆಸ್ತಿಯ ಶೇಕಡವಾರು | ಶೇಕಡ 115% |

ಆರೋಪಿತ ಅಧಿಕಾರಿಯು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಅಧಿಕ ಪ್ರಮಾಣದಲ್ಲಿ ಅಕ್ರಮ ಆಸ್ತಿಗಳನ್ನು ಗಳಿಸಿರುವುದು ಕಂಡು ಬಂದಿದ್ದು, ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988 ರ ಕಲಂ 13(1) (ಇ) ಸಹವಾಚನ 13 (2) ಅನ್ವಯ ಅಪರಾಧಿಕ ದುರ್ನಡತೆ ಎಸಗಿರುವುದು ದೃಢಪಟ್ಟಿರುತ್ತದೆ.

ಆರೋಪಿತರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ, ತಮ್ಮ ಹುದ್ದೆಯ ಪ್ರಭಾವವನ್ನು ಬಳಸಿ ಪ್ರಕರಣದ ಸ್ವತಂತ್ರ ಸುಗಮ ತನಿಖೆಗೆ ಅಡ್ಡಿಪಡಿಸುವ ಮತ್ತು ಸಾಕ್ಷ್ಯಾಧಾರಗಳನ್ನು ತಿರುಚುವ, ನಾಶಪಡಿಸುವ ಸಾಧ್ಯತೆಗಳಿರುವುದರಿಂದ, ಸದರಿಯವರನ್ನು ಅಮಾನತ್ತಿನಲ್ಲಿಟ್ಟು ಹಾಗೂ ಲೀನ್‌ನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ತಮ್ಮ ಪ್ರಸ್ತಾವನೆಯಲ್ಲಿ ಶಿಫಾರಸ್ಸನ್ನು ಮಾಡಿರುತ್ತಾರೆ. ಕರ್ನಾಟಕ ಲೋಕಾಯುಕ್ತದಿಂದ ಮಾಡಲಾದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ, ಶಿಫಾರಸ್ಸನ್ನು ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 115 ಕೈಸೇವಿ 2014, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ವಿ.ಮುನಿಯಪ್ಪ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಾಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತಾಂತ್ರಿಕ ಉನ್ನತೀಕರಣ ಪರಿಷತ್ತು, ಬೆಂಗಳೂರು ಇವರ ಮನೆಯ ಮೇಲೆ ಮಾನ್ಯ ಲೋಕಾಯುಕ್ತರು ಧಾಳಿ ನಡೆಸಿದಾಗ ಇವರ ಮೇಲಿನ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಅಧಿಕ ಪ್ರಮಾಣದಲ್ಲಿ ಅಕ್ರಮ ಆಸ್ತಿ ಗಳಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಸದರಿಯವರು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988 ರ ಕಲಂ 13 (1) (ಇ) ಸಹವಾಚನ 13 (2) ಅನ್ವಯ ಅಪರಾಧಿಕ ದುರ್ನಡತೆ ಪ್ರದರ್ಶಿಸಿರುವುದು ದೃಥಪಟ್ಟಿರುವುದರಿಂದ ಇವರನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 10 (ಅಅ) ರನ್ವಯ, ಇವರ ಸೇವೆಯನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಿಂದ ಹಿಂಪಡೆದು, ಸದರಿ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ನಿಯಮಾವಳಿ ರೀತ್ಯಾ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಹಾಗೂ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸರ್ಕಾರದ ಪೂರ್ವಾನುಮತಿಯಿಲ್ಲದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಚಂದ್ರಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,

(ಸೇವೆಗಳು ಮತ್ತು ಸಮನ್ವಯ)

**PR-753**

**SC-50**

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯ ಅಧಿಕಾರಿ/ನೌಕರರ ವರ್ಗಾವಣೆ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009, ದಿನಾಂಕ: 24.08.2009.
2. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009, (ಭಾ–2), ದಿನಾಂಕ: 13.01.2011.
3. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ: 22.11.2001.
4. ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾ–2), ದಿನಾಂಕ: 21.05.2011,
5. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ–4/37/2013–14, ದಿನಾಂಕ: 31.05.2014.

**ಪ್ರಸ್ತಾವನೆ:–**

ಮೇಲೆ ಓದಲಾದ (4)ರ ಆದೇಶದಲ್ಲಿ ಪೊಲೀಸ್ ಇಲಾಖೆಯ ಅಧಿಕಾರಿ/ನೌಕರರ ವರ್ಗಾವಣೆ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. ಉಲ್ಲೇಖ (5) ರಲ್ಲಿರುವ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕರ್ನಾಟಕ ಪೊಲೀಸ್ (ತಿದ್ದುಪಡಿ) ಅಧಿನಿಯಮಕ್ಕೆ ತಿದ್ದುಪಡಿ ತಂದಿದ್ದು ಆ ಮೂಲಕ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣೆಯನ್ನು ಪೊಲೀಸ್ ಸಿಬ್ಬಂದಿ ಮಂಡಳಿಯು ಮಾಡಬೇಕಾಗಿರುವುದರಿಂದ ಪೊಲೀಸ್ ಉಪ ವಿಭಾಗ, ವೃತ್ತ ಮತ್ತು ಪೊಲೀಸ್ ಠಾಣೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿವಿಲ್ ವೃಂದದ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣೆಗೆ ಪೊಲೀಸ್ ಸಿಬ್ಬಂದಿ ಮಂಡಳಿಯು ಪ್ರತಿಯೊಂದು ವೃಂದಗಳಿಗೆ ವರ್ಗಾವಣಾ ಮಾರ್ಗ ಸೂಚಿಗಳನ್ನು ಅಳವಡಿಸಲು ಸಲಹೆ ನೀಡಿದ್ದು, ಪೊಲೀಸ್ ಸಿಬ್ಬಂದಿ ಮಂಡಳಿಯ ಸಲಹೆಯನ್ನು ಪರಿಗಣಿಸಿ ಪೊಲೀಸ್ ಅಧಿಕಾರಿ/ಸಿಬ್ಬಂದಿಗಳ ವರ್ಗಾವಣಾ ಮಾರ್ಗಸೂಚಿಗಳನ್ನು ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಇ 2014 ಬೆಂಗಳೂರು, ದಿನಾಂಕ: 16.09.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯ ಪೊಲೀಸ್ ಉಪಾಧೀಕ್ಷಕರು (ಸಿವಿಲ್), ಪೊಲೀಸ್ ನಿರೀಕ್ಷಕರು (ಸಿವಿಲ್), ಪೊಲೀಸ್ ಉಪನಿರೀಕ್ಷಕರು(ಸಿವಿಲ್), ಪೊಲೀಸ್ ಎಎಸ್ಐ/ಹೆಚ್‌ಸಿ/ಪಿಸಿ (ಸಿವಿಲ್) ವೃಂದಗಳಿಗೆ ಸಂಬಂಧಿಸಿದಂತೆ ಸರ್ಕಾರವು ಕೆಲವೊಂದು ಪ್ರಕರಣಗಳಲ್ಲಿ ನಿಗದಿಪಡಿಸಿರುವ ಮಾರ್ಗಸೂಚಿಗಳನ್ನು ಸಡಿಲಗೊಳಿಸುವ (on Extraordinary circumstances) ಷರತ್ತಿಗೊಳಪಟ್ಟು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1, 2, 3 ಮತ್ತು 4 ರಲ್ಲಿರುವ ವರ್ಗಾವಣಾ ಮಾರ್ಗಸೂಚಿಗಳಿಗೆ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಎ)

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಇ 2014, ದಿನಾಂಕ: 16.09.2014ಕ್ಕೆ**

**ಅನುಬಂಧ-1**

**(ಪೊಲೀಸ್ ಉಪಾಧೀಕ್ಷಕರು (ಸಿವಿಲ್)**

1. ಪೊಲೀಸ್ ಉಪಾಧೀಕ್ಷಕರಾಗಿ ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಠ ಸೇವಾ ಅವಧಿ-8 ವರ್ಷಗಳು ಪೂರೈಸಿರಬೇಕು.
2. ಪೊಲೀಸ್ ಉಪಾಧೀಕ್ಷಕರಾಗಿ ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಠ 3 ವರ್ಷ ಮತ್ತು ಕಾರ್ಯಕಾರ್ಯೇತರ ಹುದ್ದೆಯಲ್ಲಿ ಗರಿಷ್ಠ 4 ವರ್ಷ ಸೇವಾ ಅವಧಿಯನ್ನು ಪ್ರತಿ ಹುದ್ದೆಯಲ್ಲಿ ಸಲ್ಲಿಸಿರಬೇಕು.
3. ಪೊಲೀಸ್ ಉಪಾಧೀಕ್ಷಕರಾಗಿ ಅನುಕ್ರಮವಾಗಿ 3 ಹುದ್ದೆಗಳಲ್ಲಿ ಅಥವಾ ಗರಿಷ್ಠ 8 ವರ್ಷಗಳ ಕಾಲ ಕಾರ್ಯಕಾರ್ಯೇತರ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವವರು ಕಡ್ಡಾಯವಾಗಿ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು. ಒಂದು ವೇಳೆ ಅವರು ಸ್ವತಃ ಲಿಖಿತ ಮೂಲಕ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸದ ಹೊರತು ಕಾರ್ಯಕಾರಿ ಹುದ್ದೆಯಲ್ಲಿಯೇ ಕರ್ತವ್ಯ ನಿರ್ವಹಿಸಬೇಕು.
4. ಪೊಲೀಸ್ ಉಪಾಧೀಕ್ಷಕರು, ಅವರ ಸ್ವಸ್ಥಳದ ಉಪ ವಿಭಾಗದಲ್ಲಿ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಕೂಡದು. ಬೆಂಗಳೂರು ನಗರ ಸ್ವಸ್ಥಳವಾದಲ್ಲಿ ಆಯಾ ವಿಭಾಗದ ಡಿ.ಸಿ.ಪಿ.ಯವರ ಕಾರ್ಯ ವ್ಯಾಪ್ತಿಯನ್ನು ಸ್ವಸ್ಥಳ ಎಂದು ಪರಿಗಣಿಸುವುದು.
5. ಪೊಲೀಸ್ ನಿರೀಕ್ಷಕರ ಹುದ್ದೆಯಿಂದ ಪೊಲೀಸ್ ಉಪಾಧೀಕ್ಷಕರ ಹುದ್ದೆಗೆ ಬಡ್ತಿ ಹೊಂದಿದಾಗ ಪ್ರತಿಯೊಬ್ಬ ಅಧಿಕಾರಿಯು ಕನಿಷ್ಠ 1 ವರ್ಷ ಕಾರ್ಯಕಾರ್ಯೇತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು.
6. ಬಡ್ತಿ ಹೊಂದಿದ ಪ್ರತಿಯೊಬ್ಬ ಪೊಲೀಸ್ ಉಪಾಧೀಕ್ಷಕರು ಕಡ್ಡಾಯವಾಗಿ 4 ವಾರಗಳ ಪುನರ್ಮನನ ತರಬೇತಿಯನ್ನು ಬಡ್ತಿ ಹೊಂದಿದ 1
ವರ್ಷದೊಳಗಾಗಿ ಪಡೆಯಬೇಕು. ಯಾವುದೇ ಪೊಲೀಸ್ ಉಪಾಧೀಕ್ಷಕರು 4 ವಾರಗಳ ಪುನರ್ಮನನ ತರಬೇತಿಯನ್ನು ಕಾಲ ಕಾಲಕ್ಕೆ ನಿಯಮಿಸುವ ನಿಯಮಗಳಂತೆ ಮುಗಿಸದ ಹೊರತು ಕಾರ್ಯಕಾರಿ ಹುದ್ದೆಗೆ ನೇಮಿಸುವಂತಿಲ್ಲ.
7. ಪೊಲೀಸ್ ಉಪಾಧೀಕ್ಷಕರು,ಅವರ ವಿರುದ್ಧ ಯಾವುದೇ ಪ್ರಮುಖ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ ಅಥವಾ ವಿಚಾರಣೆಯಲ್ಲಿರುವ ಅಪರಾಧ ಪ್ರಕರಣ ಅಥವಾ ಪೊಲೀಸ್ ಸಿಬ್ಬಂದಿ ಮಂಡಳಿಯು ಅವರು ಅನರ್ಹ ಎಂದು ಪರಿಗಣಿಸಿದ್ದಲ್ಲಿ, ಅಂತಹ ಅಧಿಕಾರಿಯನ್ನು ಕಾರ್ಯಕಾರಿ ಹುದ್ದೆಗೆ ನೇಮಿಸುವಂತಿಲ್ಲ.

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು-ಎ)

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಇ 2014, ದಿನಾಂಕ: 16.09.2014ಕ್ಕೆ**

**ಅನುಬಂಧ-2**

**(ಪೊಲೀಸ್ ನಿರೀಕ್ಷಕರ ಹುದ್ದೆಗಳು (ಸಿವಿಲ್)**

1. ಪೊಲೀಸ್ ನಿರೀಕ್ಷಕರಾಗಿ ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಠ ಸೇವಾ ಅವಧಿ-8 ವರ್ಷಗಳು ಪೂರೈಸಿರಬೇಕು.
2. ಪೊಲೀಸ್ ನಿರೀಕ್ಷಕರಾಗಿ ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಠ 3 ವರ್ಷ ಮತ್ತು ಕಾರ್ಯಕಾರ್ಯೇತರ ಹುದ್ದೆಯಲ್ಲಿ ಗರಿಷ್ಠ 4 ವರ್ಷ ಸೇವಾ ಅವಧಿಯನ್ನು ಪ್ರತಿ ಹುದ್ದೆಯಲ್ಲಿ ಸಲ್ಲಿಸಿರಬೇಕು.
3. ಪೊಲೀಸ್ ನಿರೀಕ್ಷಕರು (ಸಿವಿಲ್) ರವರು ಅನುಕ್ರಮವಾಗಿ 3 ಹುದ್ದೆಗಳಲ್ಲಿ ಅಥವಾ ಗರಿಷ್ಠ 8 ವರ್ಷಗಳ ಕಾಲ ಕಾರ್ಯಕಾರಿ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವವರು ಕಡ್ಡಾಯವಾಗಿ ಕಾರ್ಯಕಾರ್ಯೇತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು.
4. ಪೊಲೀಸ್ ನಿರೀಕ್ಷಕರು ಅನುಕ್ರಮವಾಗಿ 3 ಹುದ್ದೆಗಳಲ್ಲಿ ಅಥವಾ ಗರಿಷ್ಠ 8 ವರ್ಷಗಳ ಕಾಲ ಕಾರ್ಯಕಾರ್ಯೇತರ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವವರು ಕಡ್ಡಾಯವಾಗಿ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು. ಒಂದು ವೇಳೆ ಅವರು ಸ್ವತಃ ಲಿಖಿತ ಮೂಲಕ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸದ ಹೊರತು ಕರ್ಯಕಾರಿ ಹುದ್ದೆಯಲ್ಲಿಯೇ ಕರ್ತವ್ಯ ನಿರ್ವಹಿಸಬೇಕು.
5. ಪೊಲೀಸ್ ನಿರೀಕ್ಷಕರು ಅವರ ಸ್ವಸ್ಥಳದ ಉಪ ವಿಭಾಗದಲ್ಲಿ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಕೂಡದು. ಬೆಂಗಳೂರು ನಗರ ಸ್ವಸ್ಥಳವಾದಲ್ಲಿ ಆಯಾ ವಿಭಾಗದ ಡಿ.ಸಿ.ಪಿ.ಯವರ ಕಾರ್ಯ ವ್ಯಾಪ್ತಿಯನ್ನು ಸ್ವಸ್ಥಳ ಎಂದು ಪರಿಗಣಿಸುವುದು.
6. ಪೊಲೀಸ್ ಉಪ ನಿರೀಕ್ಷಕರ ಹುದ್ದೆಯಿಂದ ಪೊಲೀಸ್ ನಿರೀಕ್ಷಕರ ಹುದ್ದೆಗೆ ಬಡ್ತಿ ಹೊಂದಿದಾಗ ಪ್ರತಿಯೊಬ್ಬ ಅಧಿಕಾರಿಯು ಕನಿಷ್ಠ 1 ವರ್ಷ ಕಾರ್ಯಕಾರ್ಯೇತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು.

7. ಬಡ್ತಿ ಹೊಂದಿದ ಪ್ರತಿಯೊಬ್ಬ ಪೊಲೀಸ್ ನಿರೀಕ್ಷಕರು ಕಡ್ಡಾಯವಾಗಿ 4 ವಾರಗಳ ಪುನರ್ಮನನ ತರಬೇತಿಯನ್ನು ಬಡ್ತಿ ಹೊಂದಿದ 1 ವರ್ಷದೊಳಗಾಗಿ ಪಡೆಯಬೇಕು. ಯಾವುದೇ ಪೊಲೀಸ್ ನಿರೀಕ್ಷಕರು 4 ವಾರಗಳ ಪುನರ್ಮನನ ತರಬೇತಿಯನ್ನು ಕಾಲ ಕಾಲಕ್ಕೆ ನಿಯಮಿಸುವ ನಿಯಮಗಳಂತೆ ಮುಗಿಸದ ಹೊರತು ಕಾರ್ಯಕಾರಿ ಹುದ್ದೆಗೆ ನೇಮಿಸುವಂತಿಲ್ಲ.
8. ಪೊಲೀಸ್ ನಿರೀಕ್ಷಕರು, ಅವರ ವಿರುದ್ಧ ಯಾವುದೇ ಪ್ರಮುಖ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ ಅಥವಾ ವಿಚಾರಣೆಯಲ್ಲಿರುವ ಅಪರಾಧ ಪ್ರಕರಣ ಅಥವಾ ಪೊಲೀಸ್ ಸಿಬ್ಬಂದಿ ಮಂಡಳಿಯು ಅವರು ಅನರ್ಹ ಎಂದು ಪರಿಗಣಿಸಿದ್ದಲ್ಲಿ, ಅಂತಹ ಅಧಿಕಾರಿಯನ್ನು ಕಾರ್ಯಕಾರಿ ಹುದ್ದೆಗೆ ನೇಮಿಸುವಂತಿಲ್ಲ.

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಇ 2014, ದಿನಾಂಕ: 16.09.2014ಕ್ಕೆ**

**ಅನುಬಂಧ–3**

**(ಪೊಲೀಸ್ ಉಪ ನಿರೀಕ್ಷಕರ ಹುದ್ದೆಗಳು (ಸಿವಿಲ್)**

1. ಪೊಲೀಸ್ ಉಪ ನಿರೀಕ್ಷಕರಾಗಿ ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಠ ಸೇವಾ ಅವಧಿ–8 ವರ್ಷಗಳು ಪೂರೈಸಿರಬೇಕು.
2. ಪೊಲೀಸ್ ನಿರೀಕ್ಷಕರಾಗಿ ಕಾರ್ಯಕಾರಿ ಹುದ್ದೆಯಲ್ಲಿ ಗರಿಷ್ಠ 3 ವರ್ಷ ಮತ್ತು ಕಾರ್ಯಕಾರ್ಯೇತರ ಹುದ್ದೆಯಲ್ಲಿ ಗರಿಷ್ಠ 4 ವರ್ಷ ಸೇವಾ ಅವಧಿಯನ್ನು ಪ್ರತಿ ಹುದ್ದೆಯಲ್ಲಿ ಸಲ್ಲಿಸಿರಬೇಕು.
3. ಪೊಲೀಸ್ ಉಪನಿರೀಕ್ಷಕರು (ಸಿವಿಲ್) ರವರು ಅನುಕ್ರಮವಾಗಿ 3 ಹುದ್ದೆಗಳಲ್ಲಿ ಅಥವಾ ಗರಿಷ್ಠ 8 ವರ್ಷಗಳ ಕಾಲ ಕಾರ್ಯಕಾರಿ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವವರು ಕಡ್ಡಾಯವಾಗಿ ಕಾರ್ಯಕಾರ್ಯೇತರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು.
4. ಪೊಲೀಸ್ ಉಪನಿರೀಕ್ಷಕರು ಅನುಕ್ರಮವಾಗಿ 3 ಹುದ್ದೆಗಳಲ್ಲಿ ಅಥವಾ ಗರಿಷ್ಠ 8 ವರ್ಷಗಳ ಕಾಲ ಕಾರ್ಯಕಾರ್ಯೇತರ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವವರು ಕಡ್ಡಾಯವಾಗಿ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಬೇಕು. ಒಂದು ವೇಳೆ ಅವರು ಸ್ವತಃ ಲಿಖಿತ ಮೂಲಕ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸದ ಹೊರತು ಕಾರ್ಯಕಾರಿ ಹುದ್ದೆಯಲ್ಲಿಯೇ ಕರ್ತವ್ಯ ನಿರ್ವಹಿಸಬೇಕು.
5. ಪೊಲೀಸ್ ಉಪನಿರೀಕ್ಷಕರು ಅವರ ಸ್ವಸ್ಥಳದ ಉಪ ವಿಭಾಗದಲ್ಲಿ ಕಾರ್ಯಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಕೂಡದು.
6. ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಪೊಲೀಸ್ ಉಪನಿರೀಕ್ಷಕರಾಗಿ ಬಡ್ತಿ ಹೊಂದಿದ ನಂತರ, ಕಡ್ಡಾಯವಾಗಿ 4 ವಾರಗಳ ಪುನರ್ಮನನ ತರಬೇತಿಯನ್ನು ಬಡ್ತಿ ಹೊಂದಿದ 1 ವರ್ಷದೊಳಗಾಗಿ ಪಡೆಯಬೇಕು.
7. ಪೊಲೀಸ್ ಉಪನಿರೀಕ್ಷಕರು, ಅವರ ವಿರುದ್ಧ ಯಾವುದೇ ಪ್ರಮುಖ ಇಲಾಖಾ ವಿಚಾರಣೆ, ಲೋಕಾಯುಕ್ತ ಪ್ರಕರಣ ಅಥವಾ ವಿಚಾರಣೆಯಲ್ಲಿರುವ ಅಪರಾಧ ಪ್ರಕರಣ ಅಥವಾ ಪೊಲೀಸ್ ಸಿಬ್ಬಂದಿ ಮಂಡಳಿಯು ಅವರು ಅನರ್ಹ ಎಂದು ಪರಿಗಣಿಸಿದ್ದಲ್ಲಿ, ಅಂತಹ ಅಧಿಕಾರಿಯನ್ನು ಕಾರ್ಯಕಾರಿ ಹುದ್ದೆಗೆ ನೇಮಿಸುವಂತಿಲ್ಲ.

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಿ 2014, ದಿನಾಂಕ: 16.09.2014ಕ್ಕೆ**

**ಅನುಬಂಧ–4**

**(ಪೊಲೀಸ್ ಎ.ಎಸ್.ಐ/ಹೆಚ್.ಸಿ/ಪಿ.ಸಿ (ಸಿವಿಲ್)**

1. ಪೊಲೀಸ್ ಎ.ಎಸ್.ಐ/ಹೆಚ್.ಸಿ/ಪಿ.ಸಿ (ಸಿವಿಲ್) ರವರು ಸಾಮಾನ್ಯವಾಗಿ 5 ವರ್ಷಗಳ ಕಾಲ ಪ್ರತಿ ಹುದ್ದೆಯಲ್ಲಿ ಸೇವೆ ಸಲ್ಲಿಸಬೇಕು.
2. ಪೊಲೀಸ್ ಎ.ಎಸ್.ಐ/ಹೆಚ್.ಸಿ/ಪಿ.ಸಿ (ಸಿವಿಲ್) ರವರುಗಳು ಸೇವೆಯು ಗರಿಷ್ಠ ಕಾಲಾವಧಿ 6 ವರ್ಷಗಳ ಕಾಲ ಮೀರತಕ್ಕದ್ದಲ್ಲ.
3. ಪೊಲೀಸ್ ಎ.ಎಸ್.ಐ/ಹೆಚ್.ಸಿ/ಪಿ.ಸಿ (ಸಿವಿಲ್) ರವರು ತಮ್ಮ ಸ್ವಗೃಹದ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸಬಾರದು.
4. ಹೆಚ್.ಸಿ. ಮತ್ತು ಪಿ.ಸಿ (ಸಿವಿಲ್) ರವರುಗಳು ಬಡ್ತಿ ಹೊಂದಿದ ನಂತರ, ಕಡ್ಡಾಯವಾಗಿ 2 ವಾರಗಳ ಪುನರ್ಮನನ ತರಬೇತಿಯನ್ನು ಬಡ್ತಿ ಹೊಂದಿದ 1 ವರ್ಷದೊಳಗಾಗಿ ಪಡೆಯಬೇಕು.

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

**PR-754**
**SC-100**

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಕೆ.ಸಿ.ಕಾಳಿಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 201 ಪಿಪಿಇ 2013, ದಿನಾಂಕ: 30.04.2013,
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 234 ಪಿಪಿಇ 2010, ದಿನಾಂಕ: 30.06.2014,
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ:ಡಿಪಿಎನ್:ಕೇಂಸ:ಹಿ:25:2009–10, ದಿನಾಂಕ:07.07.2014,

ಪ್ರಸ್ತಾವನೆ:–

ಮೇಲೆ ಓದಲಾದ ಕ್ರಮ ಸಂಖ್ಯೆ(3)ರಲ್ಲಿನ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಅವರ ಪತ್ರದಲ್ಲಿ ಶ್ರೀ ಕೆ.ಸಿ.ಕಾಳಿಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು ಇವರ ವಿರುದ್ಧ ಶ್ರೀ ಬಿ.ವೀರಭದ್ರಪ್ಪ, ವಿರೂಪಾಕ್ಷಪುರ, ಬೆಂಗಳೂರು ಇವರು ಮಾಡಿದ ಆರೋಪಗಳ ಸಂಬಂಧದ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ಕಛೇರಿಯ ಆದೇಶ ಸಂಖ್ಯೆ:ಡಿಪಿಎನ್:ಕೇಂಸ:ಜಿ:25:2009–10, ದಿನಾಂಕ:24.01.2011ರಲ್ಲಿ ನಡೆಸಲು ಆದೇಶಿಸಿ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸಂ:768, 9ನೇ ಮೈನ್, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು–79 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಬಿ.ರಂಗಸ್ವಾಮಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನು ನೇಮಿಸಲಾಗಿದೆ.

ಪ್ರಕರಣದ ಇಲಾಖಾ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯು ದಿನಾಂಕ:26.03.2014ರಂದು ಸಲ್ಲಿಸಿದ ಇಲಾಖಾ ವಿಚಾರಣಾ ವರದಿ ಹಾಗೂ ಇಲಾಖಾ ವಿಚಾರಣೆಗೆ ಸಂಬಂಧಪಟ್ಟ ಎಲ್ಲಾ ದಾಖಲಾತಿಗಳನ್ನು ಮುಂದಿನ ಕ್ರಮಕ್ಕೆ ಎಂದು ಕೋರಿ ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (1) ಮತ್ತು (2)ರ ಸರ್ಕಾರಿ ಅಧಿಸೂಚನೆಗಳ ಪ್ರಕಾರ ದಿನಾಂಕ: 01.04.2013 ರಿಂದ ಇದುವರೆಗೂ ಇಲಾಖೆಯಲ್ಲಿ ಪ್ರಭಾರಿ ನಿರ್ದೇಶಕರು ಕರ್ತವ್ಯ ನಿರ್ವಹಿಸುತ್ತಿದ್ದು, ಶ್ರೀ ಕೆ.ಸಿ.ಕಾಳಿಂಗಪ್ಪ ಇವರ ವಿರುದ್ಧದ ಇಲಾಖಾ ವಿಚಾರಣೆಯ ವರದಿಯ ಮೇಲೆ ಶಿಕ್ಷೆ/ದಂಡನೆಯನ್ನು ನಿಗಧಿಪಡಿಸಲು ಶಾಸನಬದ್ಧ ಅಧಿಕಾರವನ್ನು ಹೊಂದಿರುವುದಿಲ್ಲ.

ಆದ್ದರಿಂದ, ಶ್ರೀ ಕೆ.ಸಿ.ಕಾಳಿಂಗಪ್ಪ ವಿರುದ್ಧದ 02 ಆರೋಪಗಳ ಸಂಬಂಧ ಇಲಾಖಾ ವಿಚಾರಣೆ ನಡೆಸಿ ದಿನಾಂಕ: 26.03.2014ರಂದು ಸಲ್ಲಿಸಿದ್ದ ವಿಚಾರಣಾಧಿಕಾರಿಯ ವರದಿಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿದೆ. ಪ್ರಕರಣದ ಆರೋಪ–1: ಶ್ರೀ ಕೆ.ಸಿ.ಕಾಳಿಂಗಪ್ಪ ಸಹಾಯಕ ಸರ್ಕಾರಿ ಅಭಿಯೋಜಕರಾಗಿ 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 16.10.2009 ರಂದು ಮೈಸೂರಿನ ಮೇಟಗಳ್ಳಿ ಪೊಲೀಸ್ ಠಾಣೆ ಕ್ರೈಂ ನಂ:189/09ರ ಆರೋಪಿ ಶ್ರೀ ರಮೇಶನ ಅಣ್ಣನಾದ ಶ್ರೀ ಬಿ.ವೀರಭದ್ರಪ್ಪ ಎಂಬುವರು ಅವರ ವಕೀಲರಾದ ಶ್ರೀ ರಘು ಎಂಬುವರು ತಿಳಿಸಿದ ಮೇರೆಗೆ ಭೇಟಿ ಮಾಡಿದಾಗ ಸದರಿಯವರಿಗೆ ಅಧಿಕಾರಿಯು ಕೇಸಿನ ಸಂಬಂಧ ಐದು ಲಕ್ಷ ಕೊಟ್ಟರೂ ಏನೂ ಮಾಡಲು ಸಾಧ್ಯವಿಲ್ಲ. ರೂ.50 ಸಾವಿರವನ್ನು ಅವರ ವಕೀಲರಾದ ಶ್ರೀ ರಘುರವರ ಬಳಿ ಕೊಡಿ ನೋಡೋಣ ಎಂದು ಸೂಚಿಸಿ, ಅವರಿಂದ ಲಂಚ ಪಡೆಯುವ ಉದ್ದೇಶವನ್ನು ಹೊಂದಿದ್ದು, ಒಬ್ಬ ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಗಳು, 1966 ನಿಯಮ 3(1)ರ ಉಪನಿಯಮ (i) ಮತ್ತು (iii) ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ ಎಂಬ ಹಾಗೂ ಆರೋಪ–2: ಶ್ರೀ ಬಿ.ವೀರಭದ್ರಪ್ಪ ಎಂಬುವರನ್ನು ಅನಾವಶ್ಯಕವಾಗಿ ತೊಂದರೆಗೆ ಈಡು ಮಾಡಲು ದುಷ್ಕಕೂಟವೊಂದನ್ನು ಯೋಜಿಸಿರುವ ತಂತ್ರದಲ್ಲಿ ಬಲಿಪಶು ಮಾಡಲು ಸಹಕರಿಸಿ, ಅಧಿಕಾರವನ್ನು ದುರುಪಯೋಗ ಮಾಡಿಕೊಂಡು ಒಬ್ಬ ಸರ್ಕಾರಿ ನೌಕರನಿಗೆ ತಕ್ಕುದಲ್ಲದ ರೀತಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಗಳು, 1966 ನಿಯಮ 3(1)ರ (iii) ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ ಎಂಬ ಬಗ್ಗೆ ವಿಚಾರಣಾಧಿಕಾರಿ ವಿಚಾರಣೆ ನಡೆಸಿ ಅಭಿಪ್ರಾಯ ನೀಡಿದ್ದಾರೆ.

ವಿಚಾರಣಾಧಿಕಾರಿಯು ಆರೋಪ–1 ನ್ನು ಕುರಿತು: ಪ್ರಕರಣದ ಎಲ್ಲಾ ಅಂಶಗಳನ್ನು ಮತ್ತು ಸನ್ನಿವೇಶವನ್ನು ಪರಿಶೀಲಿಸಿದಾಗ ಶ್ರೀ ಕೆ.ಸಿ.ಕಾಳಿಂಗಪ್ಪ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ಲಂಚಪಡೆಯುವ ಉದ್ದೇಶದಿಂದ ತರವಲ್ಲದ ರೀತಿಯಲ್ಲಿ ನಡೆದುಕೊಂಡಿದ್ದಾರೆಂದು ನಂಬುವುದು ದುಸ್ಸಾಧ್ಯ ಈ ಬಗ್ಗೆ ಶಿಸ್ತು ಪ್ರಾಧಿಕಾರವು ಯಾವುದೇ ಸಾಕ್ಷಿ ಪುರಾವೆಗಳಿಂದ ರುಜುವಾತುಪಡಿಸಲು ಅಸಮರ್ಥಗೊಂಡಿದೆ. ಆದ್ದರಿಂದ, ಆರೋಪ–1 'ನ'ಕಾರತ್ಮಕ ಎಂದು ಹಾಗೂ ಆರೋಪ–2 ನ್ನು ಕುರಿತು: ಶ್ರೀ ಕೆ.ಸಿ.ಕಾಳಿಂಗಪ್ಪರವರ ದುಷ್ಪಕೂಟವನ್ನು ರಚಿಸಿದ್ದಾರೆಂಬ ಬಗ್ಗೆ ಶಿಸ್ತು ಪ್ರಾಧಿಕಾರದ ಸಾಕ್ಷಿ ಪುರಾವೆಗಳಿರುವುದಿಲ್ಲ. ಅತಿ ಮುಖ್ಯವಾದ ವಿಷಯವೆಂದರೇ ಪ್ರಮುಖ ಸಾಕ್ಷಿ ವಕೀಲ ಶ್ರೀ ರಘುವನ್ನು ವಿಚಾರಣೆ ಮಾಡಿರುವುದಿಲ್ಲ. ಸತ್ಯಾಂಶ ಹೀಗಿರಬೇಕಾದರೆ ದುಷ್ಪಕೂಟ ರಚನೆಯ ಪ್ರಶ್ನೆಯನ್ನು ನಂಬಲು ಸಾಧ್ಯವಿಲ್ಲವೆಂದು ಸ್ಪಷ್ಟ ಪಡಿಸುತ್ತಾ, ಆರೋಪ–2 'ನ'ಕಾರತ್ಮಕ.

ಆದ್ದರಿಂದ, ಶ್ರೀ ಕೆ.ಸಿ.ಕಾಳಿಂಗಪ್ಪ ವಿರುದ್ಧದ ಆರೋಪದ ಪ್ರಕರಣ ಮತ್ತು ಈ ಸಂಬಂಧದ ಇಲಾಖಾ ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 314 ಪಿಪಿಇ 2014, ಬೆಂಗಳೂರು, ದಿನಾಂಕ: 09ನೇ ಸೆಪ್ಟೆಂಬರ್ 2014**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಸಿ.ಕಾಳಿಂಗಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು ಇವರ ವಿರುದ್ಧದ ಮೇಟಗಳ್ಳಿಯ ಪೊಲೀಸ್ ಠಾಣೆ ಕ್ರೈಂ.ನಂ:189/09ರ ಪ್ರಕರಣದ ಸಂಬಂಧದ ಆರೋಪಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರ (2)ರಡಿ ನಡೆಸಿದ ಇಲಾಖಾ ವಿಚಾರಣಾ ವರದಿಯ ಮೇರೆಗೆ ಶ್ರೀ ಕೆ.ಸಿ.ಕಾಳಿಂಗಪ್ಪ ಇವರನ್ನು ಕರ್ನಾಟಕ ಸರ್ಕಾರಿ ಸೇವಾ (ನಡತೆ) ನಿಯಮಗಳು, 1966ರ ನಿಯಮ3(1)ರ ಉಪನಿಯಮ (i) ಮತ್ತು (iii) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆಂಬ ಆರೋಪಗಳಿಂದ ಸಂಪೂರ್ಣವಾಗಿ ದೋಷಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಎ)

PR-755
SC-10

## ಒಳಾಡಳಿತ ಸಚಿವಾಲಯ

**ವಿಷಯ :** ಸಿಟಿ ಸಿವಿಲ್ ನ್ಯಾಯಾಲಯ ಬೆಂಗಳೂರು ಇಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘರ್ಷಣೆ ಕುರಿತು ನ್ಯಾ.ಮೂ. ಶ್ರೀ.ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದ ಮಂಡಿಸಿದ ಶ್ರೀ.ಜಿ.ಕೆ ಬೇಕಲ್, ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಇವರಿಗೆ ಸಂಭಾವನೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 4 ಪಿಸಿಇ 2012, ದಿನಾಂಕ: 09.03.2012.

2. ದಿನಾಂಕ: 13.08.2012ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012.

3. ಶ್ರೀ.ಜಿ.ಕೆ ಬೇಕಲ್, ವಕೀಲರು, ನಿವೃತ್ತ ಉಪ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಮನವಿ ದಿನಾಂಕ: 12.08.2014.

**ಪ್ರಸ್ತಾವನೆ:–**

ದಿನಾಂಕ: 02.03.2012ರಂದು ಬೆಂಗಳೂರು ನಗರದ ಸಿವಿಲ್ ನ್ಯಾಯಾಲಯದ ಆವರಣದಲ್ಲಿ ವಕೀಲರು, ಮಾಧ್ಯಮ ಪ್ರತಿನಿಧಿಗಳು ಮತ್ತು ಪೊಲೀಸ್ ನಡುವೆ ನಡೆದ ಘಟನೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಲು ನ್ಯಾಯಮೂರ್ತಿ ಶ್ರೀ.ಆರ್.ಜಿ. ವೈದ್ಯನಾಥ ಆಯೋಗವನ್ನು ಮೇಲೆ ಓದಲಾದ(1)ರ ಆದೇಶದಲ್ಲಿ ನೇಮಿಸಲಾಗಿದೆ.

ಶ್ರೀ.ಜಿ.ಕೆ ಬೇಕಲ್ ವಕೀಲರು, (ನಿವೃತ್ತ ಉಪ ಪೊಲೀಸ್ ಆಯುಕ್ತರು) ಬೆಂಗಳೂರು ಅವರನ್ನು ನ್ಯಾಯಮೂರ್ತಿ ಶ್ರೀ.ಆರ್.ಜಿ. ವೈದ್ಯನಾಥ ವಿಚಾರಣಾ ಆಯೋಗದ ಮುಂದೆ ಸರ್ಕಾರದ ಪರವಾಗಿ ವಾದಿಸಲು ಮೇಲೆ ಓದಲಾದ(2)ರ ಆದೇಶದಲ್ಲಿ ನೇಮಕ ಮಾಡಲಾಗಿದೆ.

ಶ್ರೀ ಜಿ.ಕೆ ಬೇಕಲ್, ವಕೀಲರು, ಬೆಂಗಳೂರು ಇವರು ಸರ್ಕಾರದ ಪರವಾಗಿ ಜುಲೈ ತಿಂಗಳ ದಿನಾಂಕ: 04.07.2014, 05.07.2014 & 19.07.2014, ಒಟ್ಟು 03 ಮಹತ್ವದ ದಿನಗಳು ವಾದಿಸಿದ ಸಲುವಾಗಿ, ಸಂಭಾವನೆಯಾಗಿ ದಿನವೊಂದಕ್ಕೆ ರೂ.10,000/– ರಂತೆ 03 ದಿನಗಳಿಗೆ ರೂ.30,000/–ಗಳ (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಮೊತ್ತವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ(3)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 11 ಪಿಸಿಇ 2012, ಬೆಂಗಳೂರು ದಿನಾಂಕ: 18.09.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ.ಜಿ.ಕೆ ಬೇಕಲ್, ವಕೀಲರು(ನಿವೃತ್ತ ಉಪ ಪೊಲೀಸ್ ಆಯುಕ್ತರು), ಬೆಂಗಳೂರು ಇವರಿಗೆ ಈ ಕೆಳಕಂಡಂತೆ ಸಂಭಾವನೆಯನ್ನು ಮಂಜೂರು ಮಾಡಲಾಗಿದೆ.

| ಕ್ರ. ಸಂ. | ಸಂಭಾವನೆಯ ವಿವರ | ಮೊತ್ತ |
|---|---|---|
| 1. | Effective hearing (3 days) dated, 04.07.2014, 05.07.2014 & 19.07.2014 @ ₹.10,000/-per day | 30,000,00 |
| | **ಒಟ್ಟು ಮೊತ್ತ.** **(ರೂಪಾಯಿ ಮೂವತ್ತು ಸಾವಿರಗಳು ಮಾತ್ರ)** | **30,000,00** |

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ **"2070–00–105–0–02–059 ವಿಶೇಷ ತನಿಖಾ ಆಯೋಗಗಳು"** ಅಡಿಯಲ್ಲಿ ಭರಿಸತಕ್ಕದ್ದು. ಸದರಿ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಹಣವನ್ನು ಹಿಂಪಡೆದು ವಿತರಿಸಲು ಸರ್ಕಾರದ ಅಧೀನ ಕಾರ್ಯದರ್ಶಿ(ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ ಇವರನ್ನು ಹಣ ಹಿಂಪಡೆಯುವ ಮತ್ತು ವಿತರಿಸುವ ಅಧಿಕಾರಿಯನ್ನಾಗಿ ನೇಮಿಸಲಾಗಿದೆ.

3. ಈ ಆದೇಶವನ್ನು ಇಲಾಖೆ ಆರ್ಥಿಕ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ದಿನಾಂಕ: 27.01.2012ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಿದ ರೀತ್ಯಾ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋವಿಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)

**PR-757**
**SC-50**

## ಇಂಧನ ಸಚಿವಾಲಯ

**ವಿಷಯ :** ಇಂಧನ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 7 ಡಿಎಸ್‌ವೈ 2014, ದಿನಾಂಕ: 12.06.2014.

2. ಸರ್ಕಾರದ ಪತ್ರ ಸಂಖ್ಯೆ: ಇಎನ್ 242 ಸಮನ್ವಯ 2014, ದಿನಾಂಕ: 09.09.2014.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸಚಿವಾಲಯದ ವಿವಿಧ ಇಲಾಖೆಗಳಿಗೆ ಬೇಕಾಗುವ ಲೇಖನ ಸಾಮಗ್ರಿಗಳನ್ನು ಮತ್ತು ಇನ್ನಿತರ ಬಳಕೆ ಪದಾರ್ಥಗಳನ್ನು ಖರೀದಿಸುವ ಅಧಿಕಾರವನ್ನು ಆಯಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದೆ ಮತ್ತು ಈ ಆದೇಶದಲ್ಲಿ ಇಂಧನ ಇಲಾಖೆಗೆ ಲೇಖನ ಸಾಮಗ್ರಿಗಳನ್ನು ಖರೀದಿಸಲು ಲೆಕ್ಕ ಶೀರ್ಷಿಕೆ 2052–00–090–0–01–051 (ಸಾಮಾನ್ಯ ವೆಚ್ಚ – ಲೇಖನ ಸಾಮಗ್ರಿಗಳು) ಯಲ್ಲಿ ರೂ.30,000/– (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಒದಗಿಸಿರುತ್ತಾರೆ.

ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವಂತೆ ಮೆ: ಜನತಾ ಬಜಾರ್, ಕ.ರಾ.ಸ.ಗ್ರಾ.ಮ.ಮ., ನಿಯಮಿತ, ಬಸವೇಶ್ವರನಗರ, ಬೆಂಗಳೂರು ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ, ಜನತಾ ಬಜಾರ್ ಇವರು ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಿ ಇದಕ್ಕೆ ಸಂಬಂಧಿಸಿದ ವೆಚ್ಚದ ಬಾಬ್ತು ರೂ. 29,952/– (ಇಪ್ಪತ್ತೊಂಬತ್ತು ಸಾವಿರದ ಒಂಬೈನೂರ ಐವತ್ತೆರಡು

ರೂಪಾಯಿಗಳು ಮಾತ್ರ) (ಮೌಲ್ಯವರ್ಧಿತ ತೆರಿಗೆ ಸೇರಿ) ಗಳನ್ನು ಸಂದಾಯ ಮಾಡುವಂತೆ ಬಿಲ್ಲನ್ನು ದಿನಾಂಕ: 19.09.2014 ರಂದು ಸಲ್ಲಿಸಿರುತ್ತಾರೆ. ಆದುದರಿಂದ, ಜನತಾ ಬಜಾರ್ ಇವರಿಗೆ ಬಿಲ್ಲಿನ ಹಣವನ್ನು ಸಂದಾಯ ಮಾಡಲು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 242 ಸಮನ್ವಯ 2014, ಬೆಂಗಳೂರು ದಿನಾಂಕ: 30.09.2014**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಹಿನ್ನೆಲೆಯಲ್ಲಿ ಇಂಧನ ಇಲಾಖೆಗೆ ಅಗತ್ಯವಿರುವ ಲೇಖನ ಸಾಮಗ್ರಿಗಳ ಖರೀದಿಗೆ ಒದಗಿಸಲಾಗಿದ್ದ ರೂ. 30,000/–ಗಳಲ್ಲಿ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಿದ ಬಾಬ್ತು ರೂ. 29,952/– (ಇಪ್ಪತ್ತೊಂಬತ್ತು ಸಾವಿರದ ಒಂಬೈನೂರ ಐವತ್ತೆರಡು ರೂಪಾಯಿಗಳು ಮಾತ್ರ) (ಮೌಲ್ಯವರ್ಧಿತ ತೆರಿಗೆ ಸೇರಿ) ಗಳನ್ನು ಮೆ: ಜನತಾ ಬಜಾರ್, ಕ.ರಾ.ಸ.ಗ್ರಾ.ಮ.ಮ. ನಿಯಮಿತ, ಬಸವೇಶ್ವರನಗರ, ಬೆಂಗಳೂರು ಇವರಿಗೆ ಸಂದಾಯ ಮಾಡಲು ಮಂಜೂರಾತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2052–00–090–0–01–051 (ಸಾಮಾನ್ಯ ವೆಚ್ಚ) (ಯೋಜನೇತರ)" ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.1996 ರಲ್ಲಿ ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR-758**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶಿಗ್ಗಾಂವ್ ಕಂದಾಯ ತಾಲ್ಲೂಕು, ಹಾವೇರಿ ಜಿಲ್ಲೆ ಇಲ್ಲಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 264 ಎಲ್‌ಸಿಎಲ್ 2014, ದಿನಾಂಕ: 13–06–2014
2. ಜಿಲ್ಲಾಧಿಕಾರಿಗಳ ಕಾರ್ಯಾಲಯ, ಹಾವೇರಿ ಜಿಲ್ಲೆರವರ ಪತ್ರ ದಿನಾಂಕ: 17–07–2014
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆರವರ ಪತ್ರ ದಿನಾಂಕ: 26–08–2014

**ಪ್ರಸ್ತಾವನೆ :**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 13–06–2014ರ ಪತ್ರದಲ್ಲಿ ಹಾವೇರಿ ಜಿಲ್ಲೆಯ ಶಿಗ್ಗಾಂವ್ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ 02 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಮೇಲೆ ಓದಲಾದ (2)ರ ದಿನಾಂಕ: 17–07–2014ರ ಪತ್ರದಲ್ಲಿ ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಸಾರ್ವಜನಿಕರು ಹಲವಾರು ಉದ್ದೇಶಗಳಿಗೆ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕಾಗಿರುವ ಪ್ರಸಂಗಗಳು ಇರುವುದರಿಂದ, ಶಿಗ್ಗಾಂವ್ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ನೇಮಕಾತಿಗೊಳಿಸುವುದು ಅವಶ್ಯವಿದೆ ಎಂದು ಅಭಿಪ್ರಾಯ ಪಟ್ಟಿರುತ್ತಾರೆ.

ಅದರಂತೆ ದಿವಾಣಿ ನ್ಯಾಯಾಧೀಶರು ಮತ್ತು ಪ್ರದನ್ಯಾದಂ, ನ್ಯಾಯಾಲಯ, ಶಿಗ್ಗಾಂವ್ ಇವರು, ಶಿಗ್ಗಾಂವ್ ತಾಲ್ಲೂಕಿನಲ್ಲಿ ಒಟ್ಟು 98 ಕಂದಾಯ ಗ್ರಾಮಗಳಿದ್ದು, 3 ಹೋಬಳಿಗಳು ಇದ್ದು, ಹಾಲಿ ಕಾರ್ಯನಿರ್ವಹಿಸುತ್ತಿರುವ ನೋಟರಿಗಳ ಕಾರ್ಯನಿರ್ವಹಣೆಯ ವರದಿಗಳನ್ನು ಪರಿಶೀಲಿಸಲಾಗಿದ್ದು, ಶಿಗ್ಗಾಂವ್ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ಒಂದು ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇರುವುದು ತಿಳಿದು ಬರುತ್ತದೆಂದು ವರದಿ ನೀಡಿದ್ದು, ಸದರಿ ವರದಿಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಇವರು ಮೇಲೆ ಓದಲಾದ (3)ರ ದಿನಾಂಕ: 26–08–2014 ರ ಪತ್ರದಲ್ಲಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 264 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್, 2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹಾವೇರಿ ಜಿಲ್ಲೆಯ ಶಿಗ್ಗಾಂವ್ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ–2)

**PR 790**
**SC 25**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಹರಪನಹಳ್ಳಿ ಕಂದಾಯ ತಾಲ್ಲೂಕು, ದಾವಣಗೆರೆ ಜಿಲ್ಲೆ ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 70 ಎಲ್‌ಸಿಎಲ್ 2014, ದಿನಾಂಕ: 22-04-2014
2. ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆರವರ ಪತ್ರ ದಿನಾಂಕ: 19-07-2014
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರ ಜಿಲ್ಲೆರವರ ಪತ್ರ ದಿನಾಂಕ: 09-09-2014

**ಪ್ರಸ್ತಾವನೆ :**

ಸರ್ಕಾರವು ರಾಜ್ಯದ ಎಲ್ಲಾ ಕಂದಾಯ ತಾಲ್ಲೂಕುಗಳಿಗೆ ಒಂದೊಂದು ನೋಟರಿ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಿದ್ದು, ಅದರಂತೆ, ಮೇಲೆ ಓದಲಾದ (1)ರ ದಿನಾಂಕ: 19-07-2014ರ ಪತ್ರದಲ್ಲಿ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಕಂದಾಯ ತಾಲ್ಲೂಕಿನಲ್ಲಿ ಹಾಲಿ ಕೆಲಸ ನಿರ್ವಹಿಸುತ್ತಿರುವ 04 ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವ ಬಗ್ಗೆ ಹಾಗೂ ಇನ್ನೂ ಹೆಚ್ಚುವರಿ ಹುದೆಗಳನ್ನು ಸೃಜಿಸುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಸಮರ್ಥನೀಯ ವಿವರಣೆಯನ್ನು ಒದಗಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಮತ್ತು ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರುಗಳನ್ನು ಕೋರಲಾಗಿತ್ತು.

ಅದರಂತೆ, ತಹಶೀಲ್ದಾರ್ ಕಛೇರಿ, ಹರಪನಹಳ್ಳಿ ಮತ್ತು ನ್ಯಾಯವಾದಿಗಳ ಸಂಘ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ ಇವರುಗಳಿಂದ ಹರಪನಹಳ್ಳಿ ಕಂದಾಯ ತಾಲ್ಲೂಕಿನಲ್ಲಿ ಜನಸಂಖ್ಯೆ ಹೆಚ್ಚಾಗಿರುವುದರಿಂದ ಇನ್ನೂ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವ ಅವಶ್ಯಕತೆ ಇದೆ ಎಂಬ ನಿರ್ಣಯದ ಪತ್ರದ ಮೇಲೆ (3)ರಲ್ಲಿ ಓದಲಾದ ದಿನಾಂಕ : 19-07-2013ರ ಪತ್ರದೊಂದಿಗೆ ಅಪರ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು, ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಜಿಲ್ಲೆ ಇವರು ರಾಜ್ಯ ಸರ್ಕಾರದಿಂದ ನೇಮಕಗೊಂಡ 04 ನೋಟರಿಗಳಿದ್ದು, ಸದರಿ ತಾಲ್ಲೂಕಿನಲ್ಲಿ ಹಾಲಿ ಇರುವ ನೋಟರಿಗಳ ಸಂಖ್ಯೆಯ ಮತ್ತು ಜನಸಂಖ್ಯೆಯ ಅನುಪಾತದ ಆಧಾರದ ಮೇಲೆ ಹೋಲಿಸಿದರೆ, ನೋಟರಿಗಳಿಗೆ ಹೆಚ್ಚಿನ ಕೆಲಸದ ಒತ್ತಡವಿರುವುದರಿಂದ, ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿ ಹುದ್ದೆ ಸೃಜಿಸುವ ಅವಶ್ಯಕತೆ ಇದೆ ಎಂದು ವರದಿಯನ್ನು ನೀಡಿರುತ್ತಾರೆ.

ಮೇಲಿನ ವರದಿಗಳನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 70 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್, 2014**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR 791**

**SC 25**

**ಜೆ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-2)

## ಕಂದಾಯ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಚಿಕ್ಕಯ್ಯನಛತ್ರ ಹೋಬಳಿ, ತಾಂಡವಪುರ, ಅಡಕನಹಳ್ಳಿ, ಇಮ್ಮಾವು ಗ್ರಾಮಗಳ ಹಿಡುವಳಿ ಜಮೀನುಗಳ ಮಧ್ಯ ಇರುವ ಇಮ್ಮಾವು ಗ್ರಾಮದ ಸ.ನಂ. 371ರಲ್ಲಿ 55-16 ಎಕರೆ ಸರ್ಕಾರಿ ಜಮೀನನ್ನು ASIAN PAINTS ರವರು ಉದ್ದಿಮೆ ಸ್ಥಾಪಿಸಲು ಕೆ.ಐ.ಎ.ಡಿ.ಬಿ. ಸಂಸ್ಥೆಯ ವಶಕ್ಕೆ ನೀಡುವ ಬಗ್ಗೆ

**ಓದಲಾಗಿದೆ :** ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (2) ಸಿಆರ್: 1/2014-15, ದಿನಾಂಕ: 27-05-2014

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರ ಮೇಲೆ ಓದಲಾದ ಉಲ್ಲೇಖಿತ ಪತ್ರದಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಚಿಕ್ಕಯ್ಯನಛತ್ರ ಹೋಬಳಿ ತಾಂಡವಪುರ, ಅಡಕನಹಳ್ಳಿ, ಇಮ್ಮಾವು ಗ್ರಾಮದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಕೈಗಾರಿಕಾ ಪ್ರದೇಶ ಏಕ ಘಟಕ ಸಂಕೀರ್ಣದಲ್ಲಿ ಭೂ ಸ್ವಾಧೀನಪಡಿಸಿಕೊಳ್ಳುತ್ತಿರುವ ಹಿಡುವಳಿ ಜಮೀನುಗಳ ಮಧ್ಯ ಇರುವ ಹಾಗೂ ಆಯಕಟ್ಟಿಗೆ ಹೊಂದಿಕೊಂಡಂತಿರುವ ಇಮ್ಮಾವು ಗ್ರಾಮದ ಸ.ನಂ. 371 ರಲ್ಲಿ 55-16 ಎಕರೆ ಸರ್ಕಾರಿ ಗೋಮಾಳದ ಜಮೀನನ್ನು ಏಷಿಯನ್ ಪೇಯಿಂಟ್ಸ್ ಕಂಪನಿಗೆ ನೀಡುವ ಸಲುವಾಗಿ ಕೆ.ಐ.ಎ.ಡಿ.ಬಿ. ವತಿಯಿಂದ ಮಂಜೂರಾತಿ ಕೋರಿರುತ್ತಾರೆ.

2. ಸದರಿ ಜಮೀನು ಗೋಮಾಳದ ಜಮೀನಾಗಿದ್ದು ಅಕಾರ್‌ಬಂದ್ ದಾಖಲಾತಿಯಂತೆ ಬಿ ಖರಾಬ್ ಆಗಿದ್ದು ಪ್ರದೇಶದ ವಿವರಗಳು ಈ ಕೆಳಕಂಡಂತಿವೆ :

(ಎಕರೆ/ಗುಂಟೆಗಳಲ್ಲಿ)

| | |
|---|---|
| ದುರಸ್ತಿಪೂರ್ವ ಮೂಲ ವಿಸ್ತೀರ್ಣ ಆಕಾರ್‌ಬಂದ್‌ನಂತೆ ಒಟ್ಟು ವಿಸ್ತೀರ್ಣ | 214.07 |
| ದರಖಾಸ್ತು ಮೂಲಕ ಮಂಜೂರಾತಿ ದುರಸ್ತಿ ಆಗಿರುವ ಜಮೀನಿನ ವಿಸ್ತೀರ್ಣ | 51.07 |
| ಈ ಪೈಕಿ ಮಂಜೂರಾಗಿ ದುರಸ್ತಿಗೆ ಬಾಕಿ ಇರುವ ವಿಸ್ತೀರ್ಣ | 71.39 |
| ಉಳಿಕೆ ಗೋಮಾಳ ವಿಸ್ತೀರ್ಣ | 91.01 |

3. ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಸೆಕ್ಷನ್ 97ರಂತೆ ಪ್ರತಿ 100 ಜಾನುವಾರುಗಳಿಗೆ 30.00 ಎಕರೆ ಗೋಮಾಳದ ಜಮೀನು ಮೀಸಲಿಡಬೇಕಾಗಿದ್ದು ಈಗ ಸದರಿ ಗ್ರಾಮದಲ್ಲಿ 501 ಜಾನುವಾರುಗಳಿದ್ದು, ಸೆಕ್ಷನ್ 97ರಂತೆ ಒಟ್ಟು 150.00 ಎಕರೆ ಗೋಮಾಳ ಜಮೀನು ಕಾಯ್ದಿರಿಸಬೇಕಿರುತ್ತದೆ. ಪ್ರಸ್ತುತ 91ಎ 01 ಗುಂಟೆ ಗೋಮಾಳ ಜಮೀನು ಲಭ್ಯವಿರುತ್ತದೆ. ಮೀಸಲಿಡಬೇಕಿರುವ ವಿಸ್ತೀರ್ಣಕ್ಕಿಂತ ಸುಮಾರು 60 ಎಕರೆ ಗೋಮಾಳ ಕಡಿಮೆಯಿರುತ್ತದೆ.

4. ಸರ್ಕಾರದ ಸುತ್ತೋಲೆ ಸಂಖ್ಯೆ: ಆರ್‌ಡಿ 83 ಎಲ್‌ಜಿಪಿ 2006 ದಿನಾಂಕ: 05–01–2007ರ ಅನ್ವಯ ಗೋಮಾಳ, ಗಾಯರಾಣ, ಹುಲ್ಲುಬನಿ ಜಮೀನುಗಳನ್ನು ಯಾವುದೇ ಖಾಸಗಿ ಜಮೀನಿಗಾಗಲೀ, ಅಥವಾ ಖಾಸಗಿ ಗಣಿಗಾರಿಕೆ ಉದ್ದೇಶಕ್ಕಾಗಲೀ ಮಂಜೂರು ಮಾಡಬಾರದು ಅಂತಹ ಜಮೀನುಗಳನ್ನು ಸಮುದಾಯ ಸಾರ್ವಜನಿಕ ಉದ್ದೇಶಕ್ಕಾಗಿ ಮೀಸಲಿರಿಸತಕ್ಕದು. ಈ ಬಗ್ಗೆ ಗೌರವಾನ್ವಿತ ಉಚ್ಚ ನ್ಯಾಯಾಲಯದ ಡಬ್ಲ್ಯೂ.ಪಿ. ನಂ. 14048/2005 (ಕೆ.ಎಲ್.ಆರ್.–ಆರ್.ಇ.ಎಸ್.)ರ ದಿನಾಂಕ: 22–09–2005ರ ಆದೇಶವನ್ನು ಅನುಸರಿಸಿ ಸರ್ಕಾರದ ಸುತ್ತೋಲೆ ಸಂಖ್ಯೆ: ಕಂ.ಇ. 74 ಎಲ್.ಜಿ.ಪಿ. 2005ರ ಪ್ರಕಾರ ಯಾವುದೇ ಗೋಮಾಳ, ರಾಯರಾಣ, ಹುಲ್ಲುಬನ್ನಿ, ಜಮೀನುಗಳನ್ನು ಯಾವುದೇ ವ್ಯಕ್ತಿ ಅಥವಾ ಸಂಸ್ಥೆಗೆ ಮಂಜೂರು ಮಾಡಲು ಅವಕಾಶವಿಲ್ಲ. ಅಂತಹ ಜಮೀನುಗಳನ್ನು ಹಾಗೆಯೇ ಮುಂದುವರೆಸಿಕೊಂಡು ಹೋಗತಕ್ಕದೆಂದು ಮತ್ತು ಅಂತಹ ಜಮೀನುಗಳಲ್ಲಿ ಅನಧಿಕೃತ ಸಾಗುವಳಿಯನ್ನು ಮುಂದುವರೆಸಬಾರದೆಂದು ಹಾಗೂ ಆ ಜಮೀನುಗಳನ್ನು ಗ್ರಾಮೀಣ ಸಮುದಾಯದ ಸಾರ್ವಜನಿಕ ಉಪಯೋಗಕ್ಕೆ ಮೀಸಲಾಗಿರಿಸುವಂತೆ ನ್ಯಾಯಾಲಯವು ನಿರ್ದೇಶನ ನೀಡಿರುತ್ತದೆ. ಹಾಗೂ ಈ ಆದೇಶವನ್ನು ಕಟ್ಟುನಿಟ್ಟಾಗಿ ಪಾಲಿಸಲು ಸೂಚನೆ ಇರುವುದರಿಂದ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಯವರು ಸರ್ಕಾರದ ಆದೇಶ ಹಾಗೂ ಉಚ್ಚ ನ್ಯಾಯಾಲಯದ ಆದೇಶದಂತೆ ಗ್ರಾಮೀಣ ಸಮುದಾಯದ ಸಾರ್ವಜನಿಕ ಉದ್ದೇಶಕ್ಕೆ ಮೀಸಲಿಡಬೇಕಾದ ಅವಶ್ಯಕತೆಯಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಮಂಡಳಿಯವರಿಂದ ಏಷಿಯನ್ ಪೇಯಿಂಟ್ಸ್ ಕಂಪನಿಗೆ ಜಮೀನು ಮಂಜೂರಾತಿ ಕೋರಿರುವ ಬಗ್ಗೆ ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

5. ಕೆ.ಐ.ಎ.ಡಿ.ಬಿ. ಸಂಸ್ಥೆಯು ಸರ್ಕಾರಿ ಸ್ವಾಯತ್ತತೆ ಸಂಸ್ಥೆಯಾಗಿದ್ದು, ಈ ಹಿಂದೆಯೇ ಭೂಸ್ವಾಧೀನಮಾಡಿರುವ ಹಿನ್ನೆಲೆಯಲ್ಲಿ ಪ್ರಸ್ತಾಪಿತ ಸ.ನಂ. 371ರಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಅನ್ವಯ ಅಧಿಸೂಚನೆ ಹೊರಡಿಸಿರುವ ಪ್ರದೇಶವು ಸಹ ಒಳಗೊಂಡಿರುತ್ತದೆ. ಆದ್ದರಿಂದ ಸ.ನಂ. 371 ರಲ್ಲಿ ಪ್ರಸ್ತುತ 91–01 ಎಕರೆ ಗೋಮಾಳ ಜಮೀನು ಖುಲ್ಲಾ ಇದ್ದು, 55 ಎಕರೆ 16 ಗುಂಟೆ ಭಾಗವು ಪ್ರಸ್ತುತ ಲಭ್ಯವಿರುವ 91–01 ಎಕರೆ ಗೋಮಾಳ ಜಮೀನಿನಲ್ಲಿಯೇ ಮಧ್ಯಭಾಗದಲ್ಲಿ ಬರುತ್ತದೆ. ಕರ್ನಾಟಕ ಭೂ ಕಂದಾಯ ನಿಯಮಾವಳಿ 1966ರ ಕಲಂ 97(1) ರಂತೆ ಜಾನುವಾರುಗಳಿಗೆ ಮೀಸಲಿಟ್ಟಲ್ಲಿ ಹೆಚ್ಚುವರಿ ಗೋಮಾಳ ಜಮೀನು ಲಭ್ಯವಿರುವುದರಿಂದ ಹಾಗೂ ವರ್ಗೀಕೃತ ಜಮೀನು ಕರ್ನಾಟಕ ಭೂ ಮಂಜೂರಾತಿ ಕಾಯ್ದೆ 1969ರ ಕಲಂ 20ರಡಿ ಮಂಜೂರಾತಿಗೆ ಅವಕಾಶವಿರುವ ಹಿನ್ನೆಲೆಯಲ್ಲಿ ಈ ಬಗ್ಗೆ ಸೂಕ್ತ ನಿರ್ದೇಶನ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ :

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 57 ಎಲ್‌ಜಿಎಂ 2014, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಚಿಕ್ಕಯ್ಯನಛತ್ರ ಹೋಬಳಿ, ತಾಂಡವಪುರ, ಅಡಕನಹಳ್ಳಿ, ಇಮ್ಮಾವು ಗ್ರಾಮಗಳ ಹಿಡುವಳಿ ಜಮೀನುಗಳ ಮಧ್ಯ ಇರುವ ಇಮ್ಮಾವು ಗ್ರಾಮದ ಸ.ನಂ. 371ರಲ್ಲಿ 55–16 ಎಕರೆ ಸರ್ಕಾರಿ ಜಮೀನುಗಳ ಮಂಜೂರಾತಿ ಜಮೀನನ್ನು ಪ್ರಚಲಿತ ಮಾರುಕಟ್ಟೆ ದರ ಹಾಗೂ ಇತರೆ ಶುಲ್ಕಗಳನ್ನು ವಿಧಿಸಿ ಏಷಿಯನ್ ಪೇಯಿಂಟ್ಸ್ ಕಂಪನಿಗೆ ನೀಡುವ ಸಲುವಾಗಿ ಕೆ.ಐ.ಎ.ಡಿ.ಬಿ. ಸಂಸ್ಥೆಯ ವಶಕ್ಕೆ ನೀಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

1. ಮಂಜೂರಾತಿ ಆದೇಶದಲ್ಲಿ ಪ್ರಸ್ತಾಪಿತ ಭೂಮಿಯ ಪ್ರಚಲಿತ ಮಾರುಕಟ್ಟೆ ದರ/ಮಾರ್ಗಸೂಚಿ ದರವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
3. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
5. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
6. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
8. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



9. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

10. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

11. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

12. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR 776**

**SC 25**

**ಉದಯ ಆರ್. ನಾಯಕ್,**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ.–2)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಚೆನ್ನನರಸಿಂಹಪ್ಪ, ಹಿರಿಯ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಈ ಹುದ್ದೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂ:ಇಡಿ 171 ಡಿಸಿಇ 2007, ದಿನಾಂಕ: 15-03-2008.

2) ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ) ಇವರ ಅನಧಿಕೃತ ಟಿಪ್ಪಣಿ ಸಂ:ಇಡಿ 279 ಡಿಸಿಇ 2008, ದಿನಾಂಕ:19.01.2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:15.03.2008 ರ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ಶ್ರೀ ಚೆನ್ನನರಸಿಂಹಪ್ಪ, ರಾಜ್ಯ ಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಈ ಹುದ್ದೆಯಲ್ಲಿ ವಿಲೀನಗೊಳಿಸಲು ಶಿಕ್ಷಣ ಇಲಾಖೆಯ ಸಹಮತಿ ಇರುವುದಾಗಿ ತಿಳಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿ: 19.01.2009 ರ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ಶ್ರೀ ಚೆನ್ನನರಸಿಂಹಪ್ಪ, ರಾಜ್ಯ ಶಾಸ್ತ್ರ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಈ ಹುದ್ದೆಯಲ್ಲಿ ವಿಲೀನಗೊಳಿಸಲು ದಿನಾಂಕ:15.03.2008 ರಲ್ಲಿ ಶಿಕ್ಷಣ ಇಲಾಖೆ ನೀಡಿರುವ ಸಹಮತಿಯನ್ನೇ ಪುನರುಚ್ಚರಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಶ್ರೀ ಚೆನ್ನನರಸಿಂಹಪ್ಪ, ಹಿರಿಯ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರು ಈ ಹಿಂದೆ ನಿಯೋಜನೆ ಮೇಲೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸಿದ್ದು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಹಲವಾರು ಹೊಸ ಯೋಜನೆಗಳು ರೂಪಿತವಾಗಿದ್ದು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿಗಳ ಅವಶ್ಯಕತೆ ಇರುವುದನ್ನು ಮನಗಂಡು, ಶ್ರೀ ಚೆನ್ನನರಸಿಂಹಪ್ಪ, ಹಿರಿಯ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣ ಅಧಿಕಾರಿ ಹುದ್ದೆಯಲ್ಲಿ ವಿಲೀನಗೊಳಿಸಲು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 16(ಎ)(ii) ರಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸುವ ನಿಬಂಧನೆಗಳಿಗೊಳಪಟ್ಟು ಖಾಯಂ ಆಗಿ ವಿಲೀನಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 108 ಬಿಇಟಿ 2014, ಬೆಂಗಳೂರು ದಿನಾಂಕ:25-11-2014**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಚೆನ್ನನರಸಿಂಹಪ್ಪ, ಹಿರಿಯ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರ ಸೇವೆಯನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಈ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 16(ಎ)(ii) ಮೇರೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೇರ ನೇಮಕಾತಿ ಹುದ್ದೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ರಾಯಚೂರು ಜಿಲ್ಲೆ ಇಲ್ಲಿನ ಖಾಲಿ ಇರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಈ ಸಂಬಂಧದಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಈ ಕೆಳಗೆ ವಿಧಿಸಿರುವ ಷರತ್ತುಗಳನ್ನು ಸದರಿ ಅಧಿಕಾರಿಯಿಂದ ಖಾತ್ರಿಪಡಿಸಿಕೊಳ್ಳತಕ್ಕದ್ದು.

| | |
|---|---|
| 1 | ಸಂಬಂಧಪಟ್ಟ ನೌಕರರು ಸಕ್ರಮವಾಗಿ ನೇಮಕ ಮಾಡಿಕೊಂಡಿರಬೇಕು ಹಾಗೂ ಅವರು ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾವಧಿ/ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು; |
| 2 | ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಗೆ ನಿಗದಿಪಡಿಸಿರಬಹುದಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು, ಒಂದು ವೇಳೆ ನಿರ್ದಿಷ್ಟಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದಿದ್ದಲ್ಲಿ ಮುಂದಿನ 2 ವರ್ಷಗಳ ಒಳಗೆ ಉತ್ತೀರ್ಣರಾಗತಕ್ಕದ್ದು. |
| 3 | ಪ್ರಸ್ತಾವನೆ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಕೋರಿಕೆಯ ಮೇರೆಗೆ ಮಾಡಲು ಉದ್ದೇಶಿಸಿದ್ದಲ್ಲಿ, ವರ್ಗಾವಣೆ ಮೂಲಕ ನೇಮಿಸಲಾಗಿರುವ ಹುದ್ದೆಯಲ್ಲಿ ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 6 ರ ಮೊದಲನೇ ಪರಂತುಕದನುಸಾರ ನಿರ್ಧರಿಸಬೇಕು;<br>ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆಯ ಮೂಲಕ ಪಡೆಯಬೇಕು; |
| 4 | ಸಂಬಂಧಪಟ್ಟ ನೌಕರರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಯ ವೇತನ ಶ್ರೇಣಿ ಮತ್ತು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಯ ವೇತನ ಶ್ರೇಣಿಗಳು ಸಮಾನ ವೇತನ ಶ್ರೇಣಿಗಳಾಗಿರಬೇಕು; |
| 5 | ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಗೆ ಅಧಿಕಾರಿ/ನೌಕರರ ಮಾತೃ ಇಲಾಖೆ ಹಾಗೂ ಇವರನ್ನು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಇಲಾಖೆಗಳು ಒಪ್ಪಿರಬೇಕು; |
| 6 | ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾ ಅವಧಿಯಲ್ಲಿ ಒಮ್ಮೆ ಮಾತ್ರ ಮಾಡಿರಬೇಕು; |

| | |
|---|---|
| 7 | ನೌಕರರು ವರ್ಗಾವಣೆ ಭತ್ಯೆ ಪಡೆಯಲು ಅರ್ಹರಿರುವುದಿಲ್ಲ. |
| 8 | ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 16(ಎ)(ಬಿ) ರಡಿ ಮಾಡುವ ವರ್ಗಾವಣೆ ಮೂಲಕ ನೇರ ನೇಮಕಾತಿಗೆ ಸಂಬಂಧಿಸಿದ ಇಲಾಖಾ ಸಚಿವರ ಅನುಮೋದನೆ ಪಡೆಯುವುದು ಅವಶ್ಯಕ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್.ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 846**

**SC. 50**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಯೋಗಿನಾಥ್, ಪಿಸಿ-1400, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗಾ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: 01:DE:1984-85 (DOB No. 704:2008) Gulbarga ದಿನಾಂಕ 01.07.2008,
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ ಅಪೀಲು/28/ಈವ/2010 (ಆ.ಪು.ಸಂ.424/ಈವ/2013/1357) ದಿನಾಂಕ 29.08.2013,
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19.11.2013,
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)72/2013-14, ದಿನಾಂಕ: 11.03.2014,
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 109 ಸಿಎನ್‌ಎಸ್ 2014 ದಿನಾಂಕ: 19.09.2014.

**ಪ್ರಸ್ತಾವನೆ:**

ಶ್ರೀ ಯೋಗಿನಾಥ್, ಪಿಸಿ-1400, ರೋಜಾ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಗುಲ್ಬರ್ಗಾ ಗ್ರಾಮೀಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ಧ ಸ್ಟೇಷನ್ ಬಜಾರ್ ಪೊಲೀಸ್ ಠಾಣೆ, ಗುಲ್ಬರ್ಗಾ ಅಪರಾಧ ಸಂಖ್ಯೆ: 37/1987 ಕಲಂ 302, 201, 147, 148 R/w 149 IPC ಪ್ರಕಾರ ಪ್ರಕರಣ ದಾಖಲಾಗಿದ್ದು, ನಂತರ ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ಇಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 823/2002 ದಿನಾಂಕ 16.04.2008ರಲ್ಲಿ ನಿರ್ದೋಷಿಗಳೆಂದು ಪರಿಗಣಿಸಿ, ಆರೋಪದಿಂದ ದೋಷಮುಕ್ತರನ್ನಾಗಿ ಮಾಡಿದ್ದು, ಕ್ರಿಮಿನಲ್ ಅರ್ಜಿಯನ್ವಯ ಬಿಡುಗಡೆ ಹೊಂದಿರುವ ಕಾರಣ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಓದಲಾದ (1)ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ತೆಗೆದುಕೊಂಡು, ಸದರಿಯವರು ದಿನಾಂಕ 07.04.1984ರಿಂದ ದಿನಾಂಕ 08.02.1986ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದಲ್ಲಿ ಕಳೆದ ಅವಧಿಯೆಂದು ಹಾಗೂ ದಿನಾಂಕ 16.05.2004ರಿಂದ ಶಿಸ್ತು ಪ್ರಾಧಿಕಾರದ ಆದೇಶದ ದಿನಾಂಕದವರೆಗೆ ಸೇವೆಯಿಂದ ಹೊರಗುಳಿದ ಅವಧಿಯನ್ನು **"dies-non"** ಎಂದು ಪರಿಗಣಿಸಿ ಆದೇಶಿಸಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29.08.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಮತ್ತೊಬ್ಬ ಆರೋಪಿಯಾದ ಶ್ರೀ ಬಾಬು, ಎ.ಎಸ್.ಐ., ಇವರು ಸಲ್ಲಿಸಿದ ಮೇಲ್ಮನವಿಯನ್ನು ಪುರಸ್ಕರಿಸಲಾಗಿದೆ. ಶ್ರೀ ಬಾಬು ಮತ್ತು ಶ್ರೀ ಯೋಗಿನಾಥ್ ಇವರುಗಳು ಒಂದೇ ಪ್ರಕರಣದಲ್ಲಿ ಭಾಗಿಯಾಗಿದ್ದು, ಇಬ್ಬರಿಗೂ ಸಹಾ ಒಂದೇ ತರಹದ ತೀರ್ಪನ್ನು ತೆಗೆದುಕೊಳ್ಳುವುದು ನ್ಯಾಯಸಮ್ಮತವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರವು ನೀಡಿರುವ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 168 ಪೊಸಿಅ 2013 ಬೆಂಗಳೂರು, ದಿನಾಂಕ: 31.10.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಯೋಗಿನಾಥ್, ಪಿಸಿ-1400 ಇವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ, ಸದರಿಯವರು ಸೇವೆಯಿಂದ ಹೊರಗುಳಿದ ದಿನಾಂಕ 16.05.2004ರಿಂದ ದಿನಾಂಕ 01.07.2008ರ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**PR. 830**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ ಜಯಪ್ಪ, ಹೆಚ್‌ಸಿ–94, ಕೆ.ಟಿ.ಜೆ. ನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5):ಇವಿ:5:99–2000 (ಓ.ಬಿ.ಸಂಖ್ಯೆ: 245:2000–01) ದಿನಾಂಕ 14.09.2000,
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ ಅಪೀಲು–58/2000–01 (ಓ.ಬಿ. 187/2000) ದಿನಾಂಕ 29.03.2001,
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: ___07.2013,
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)37/2013–14 ದಿನಾಂಕ 10.02.2014 ಮತ್ತು 19.07.2014,
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 152 ಸಿಎನ್‌ಎಸ್ 2014 ದಿನಾಂಕ: 18.10.2014.

**ಪ್ರಸ್ತಾವನೆ:**

ಶ್ರೀ ಬಿ ಜಯಪ್ಪ, ಹೆಚ್‌ಸಿ–94, ಕೆ.ಟಿ.ಜೆ. ನಗರ ಪೊಲೀಸ್ ಠಾಣೆ, ದಾವಣಗೆರೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಗಾಂಧಿನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇಲ್ಲಿ ಸಿಪಿಸಿ–320 ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:–**

"ದಿನಾಂಕ:03.01.2000 ರಂದು ಸಂಜೆ 7–15 ಗಂಟೆ ಸಮಯದಲ್ಲಿ ದಾವಣಗೆರೆ ನಗರ ಉಪ ವಿಭಾಗದ ಮಟಕ ಜೂಜಾಟದ ಪತ್ತೆಯ ವಿಶೇಷ ದಳದವರು ದಾವಣಗೆರೆ ನಗರ ಹೊರವಲಯದಲ್ಲಿರುವ ಹೊಸಕ್ಯಾಂಪ್ ಅವರಗೊಳ ರಸ್ತೆಯಲ್ಲಿ ಮಟಕಾ ಬರೆಯುತ್ತಿದ್ದ ವ್ಯಕ್ತಿ ಬಗ್ಗೆ ನಿಗಾವಣೆ ಮಾಡುತ್ತಿದ್ದಾಗ್ಗೆ, ಸದ್ರಿ ಮಟಕಾ ಪಟ್ಟಿ ಬರೆಯುತ್ತಿದ್ದವನನ್ನು ನಿಮ್ಮ ಯಮಹಾ ಮೋಟಾರ್ ಸೈಕಲ್ ಮೇಲೆ ಅವನಿಂದ ಹಣ ಪಡೆದು ಕುಳ್ಳಿರಿಸಿಕೊಂಡು ಹೊಂಡದ ಸರ್ಕಲ್ ಕಡೆ ಹೋಗಿದ್ದು ಕಾರಣ ಶಿಸ್ತಿನ ಇಲಾಖೆಯ ನೌಕರರಾದ ನೀವು ಮಟಕಾ ತಡೆಗಟ್ಟುವುದನ್ನು ಬಿಟ್ಟು ಅವರಿಗೆ ಕುಮ್ಮಕ್ಕು, ನೀಡಿ ತನ್ಮೂಲಕ ತೀವ್ರ ಅಶಿಸ್ತು ಮತ್ತು ದುರ್ನಡತೆ ತೋರಿಸಿರುತ್ತೀರಿ"

ಈ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಸಮಜಾಯಿಷಿ ಪಡೆದು, ಸದರಿಯವರ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ ಇವರು ಮೇಲೆ ಓದಲಾದ (1)ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪೊಲೀಸ್ ಪೇದೆ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ 4 ವರ್ಷಗಳ ಕಾಲ ಭವಿಷ್ಯದ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಇಳಿಸಿ, ಈ ಅವಧಿಯಲ್ಲಿ ಅರ್ಜಿದಾರರು ಯಾವುದೇ ಮುಂಬಡ್ತಿ ಹೊಂದಲು ಅನರ್ಹರಾಗಿದ್ದು, ದಿನಾಂಕ 05.01.2000 ರಿಂದ ದಿನಾಂಕ 10.02.2000ರವರೆಗಿನ ಅಮಾನತ್ತಿನ ಅವಧಿಯನ್ನು ಜೀವನಾಧಾರ ಭತ್ಯೆಗೆ ಮಿತಿಗೊಳಿಸಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29.03.2001ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಸ್ವಾಭಾವಿಕ ನ್ಯಾಯದ ತತ್ವಗಳ ಪ್ರಕಾರ ಆರೋಪಕ್ಕೆ ಅನುಗುಣವಾಗಿ ದಂಡನೆ ವಿಧಿಸಿರುವುದಿಲ್ಲ. ಆ.ಪೊ.ಅ.ಯ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ವೇತನದ ಕನಿಷ್ಠ ವೇತನಕ್ಕೆ 4 ವರ್ಷಗಳ ಕಾಲ ಧಕ್ಕೆಯಾಗುವಂತೆ ಇಳಿಸಿ ಆದೇಶಿಸಿರುವುದು ಹೆಚ್ಚಿನ ಕಠಿಣ ಶಿಕ್ಷೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 107 ಪೊಸಿಅ 2013 ಬೆಂಗಳೂರು, ದಿನಾಂಕ: 29.10.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ ಜಯಪ್ಪ, ಹೆಚ್‌ಸಿ–94, ಕೆ.ಟಿ.ಜೆ. ನಗರ ಪೊಲೀಸ್ ಠಾಣೆ, ದಾವಣಗೆರೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಅರ್ಜಿದಾರರ ಒಂದು (1) ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ **(without cumulative effect)** ತಡೆಹಿಡಿಯುವ ದಂಡನೆ ಎಂದು ಮಾರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**PR. 831**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ದಿನೇಶ್ ಕುಮಾರ್, ಸಿಪಿಸಿ–1097, ಬನ್ನೇರುಘಟ್ಟ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರ ಆದೇಶ ಸಂಖ್ಯೆ: 10/ಸಿಬ್ಬಂದಿ(4)/ಶಿಕ್ಷೆ/2005–06 (ಓ.ಬಿ. ಸಂಖ್ಯೆ: 257/2007–08) ದಿನಾಂಕ 02.11.2007,
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/26/ಶಿಕ್ಷೆ/2009 (ಓ.ಬಿ.ಸಂಖ್ಯೆ: 33/2013–14) ದಿನಾಂಕ 06.06.2013,
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 21.10.2013,
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)65/2013–14 ದಿನಾಂಕ 25.06.2014.

**ಪ್ರಸ್ತಾವನೆ:**

ಶ್ರೀ ದಿನೇಶ್‌ಕುಮಾರ್, ಸಿಪಿಸಿ–1097, ಬನ್ನೇರುಘಟ್ಟ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರು ಈ ಹಿಂದೆ ತಲಘಟ್ಟಪುರ ಪೊಲೀಸ್ ಠಾಣೆಯಲ್ಲಿ ಅಧಿಕಾರ ದುರುಪಯೋಗ ಕರ್ತವ್ಯಲೋಪ, ಅತೀವ ದುರ್ನಡತೆ ಪ್ರದರ್ಶಿಸಿದ ಕಾರಣ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89ರ ನಿಯಮ 6ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ದಿನೇಶ್‌ಕುಮಾರ್ ಸಿ.ಪಿ.ಸಿ–1097, ಚನ್ನಪಟ್ಟಣ ಪುರ ಪೊಲೀಸ್ ಠಾಣೆ ಆದ ನೀವು ಈ ಹಿಂದೆ ತಲಘಟ್ಟಪುರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:12.09.2005ರಂದು ಬೆಳಿಗ್ಗೆ 10–00 ಗಂಟೆಗೆ ಕೋಣನಕುಂಟೆ ಮತ್ತು ಅಂಜನಾಪುರ ಬಡಾವಣೆಯಲ್ಲಿ ಬಾಡಿಗೆ ಮನೆ ಹುಡುಕಿಕೊಂಡು ಬಂದಿದ್ದ ಕು॥ ಸುಕನ್ಯ ಮತ್ತು ಅವರ ಸಂಬಂಧಿ ನವೀನ್‌ರವರು ಕೆಎ–03–514ರ ಕಾರಿನಲ್ಲಿ ಬೆಳಿಗ್ಗೆ 11–00 ಗಂಟೆ ಸಮಯದಲ್ಲಿ ಅಂಜನಾಪುರ ಬಡಾವಣೆಯ ರಸ್ತೆ ಬದಿ ಕಾರಿನಲ್ಲಿ ಕುಳಿತಿದ್ದಾಗ ನೀವು ಪೊಲೀಸ್ ಜೀಪನ್ನು ಚಾಲನೆ ಮಾಡಿಕೊಂಡು ಅಂದಿನ ಪಿಎಸ್‌ಐ ಶ್ರೀ ವಿರುಪಾಕ್ಷಸ್ವಾಮಿರವರೊಂದಿಗೆ ಅಲ್ಲಿಗೆ ಹೋಗಿ ಕಾರಿನಲ್ಲಿದ್ದ ನವೀನ್ ಮತ್ತು ಕು॥ ಸುಕನ್ಯರವರುಗಳಿಗೆ ಅವ್ಯಾಚ್ಯ ಶಬ್ದಗಳಿಂದ ಬೈದು ವೇಶ್ಯಾವಾಟಿಕೆ ಮಾಡುತ್ತಿದ್ದಿರೆಂದು ಹೆದರಿಸಿ ಅವರಿಂದ 50,000/– ಹಣದ ಬೇಡಿಕೆ ಒಡ್ಡಿ ಎ.ಟಿ.ಎಂ. ನಿಂದ ಹಣವನ್ನು ತೆಗೆದುಕೊಡುವಂತೆ ಬೆಂಗಳೂರು ನಗರದ ಕೆಲವು ಕಡೆಗಳಲ್ಲಿ ವಿನಾಕಾರಣ ಅವರನ್ನು ಕಾರಿನಲ್ಲಿ ಸುತ್ತಾಡಿಸಿದ್ದು ಅಲ್ಲದೆ ಅವರನ್ನು ಠಾಣೆಗೆ ಕರೆತಂದು ಅಕ್ರಮ ಬಂಧನದಲ್ಲಿಟ್ಟು ಅವರಿಗೆ ಮಾನಸಿಕ ಮತ್ತು ದೈಹಿಕ ಹಿಂಸೆ ಹಾಗೂ ಕಿರುಕುಳವನ್ನು ನೀಡಿರುವುದು ಮತ್ತು ಕು॥ ಸುಕನ್ಯರೊಂದಿಗೆ ಅಸಭ್ಯ ರೀತಿಯಲ್ಲಿ ವರ್ತಿಸಿ ಆಕೆಯ ಚಾರಿತ್ರವಧೆ ಮಾಡಿ ನೀವು ಕರ್ತವ್ಯದಲ್ಲಿ ಅತೀವ ದುರ್ನಡತೆ, ಅಧಿಕಾರ ದುರುಪಯೋಗ, ಕರ್ತವ್ಯ ಲೋಪವನ್ನು ಎಸಗಿರುವುದು ಕಂಡು ಬರುತ್ತೆ. ಆದ್ದರಿಂದ ಈ ದೋಷರೋಪಣಾ ಪತ್ರವನ್ನು ನಿಮಗೆ ನೀಡಲಾಗಿದೆ".

ಇಲಾಖಾ ವಿಚಾರಣೆಯಲ್ಲಿ ಆ.ಪೊ.ಅ.ರವರ ಮೇಲಿನ ಆಪಾದನೆಗಳು ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿದ್ದು, ಅದರಂತೆ ಆ.ಪೊ.ಅ.ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ, ಆ.ಪೊ.ಅ.ರವರು ನೀಡಿದ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 02.11.2007ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 2 ವರ್ಷಗಳ ಕಾಲ ಮುಂದೂಡಿ ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 06.06.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ. ವಿರುದ್ಧ ಗಂಭೀರ ಸ್ವರೂಪದ ಆರೋಪವಿದ್ದು ಅವರಿಗೆ ನೀಡಿದ ದಂಡನೆಯು ಸಮಂಜಸವಾಗಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 154 ಪೊಸಿಅ 2013 ಬೆಂಗಳೂರು, ದಿನಾಂಕ: 27.10.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ದಿನೇಶ್ ಕುಮಾರ್, ಸಿಪಿಸಿ–1097, ಬನ್ನೇರುಘಟ್ಟ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**PR. 833**

*ಪ್ರಕಾಶಕರು:*– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59